# ಸಿದ್ಧಗಂಗಾ

ಸಂಪುಟ—೨೧    ಸಂಚಿಕೆ-೮    ಆಗಸ್ಟ್, ೧೯೮೩

## ಗುರು ಸಿದ್ಧಲಿಂಗೇಶ

ಗುರುವಿನಡಿದಾವರೆಯ ಪರಿಚರ್ಯೆಯಂ ಮಾಡು
ತಿರಲೊಂದು ದಿನ ದೀಪದೊಳು ತೈಲವಿಲ್ಲದಿರೆ
ಹರುಷದಿಂ ನೀರೆರೆದು ದಿವ್ಯಕಾಂತಿಯನೆಸಗಿ ತದ್ಗುರುವಿಗತಿಮೋದಮಂ ।
ನೆರಪಿ ಲೋಕದಿ ಮಹತ್ವನಿಧಿಯೆಂದೆನಿಪ ಘನ
ಬಿರುದವಧರಿಸಿ ಭುವನಾಳಿಯಂ ರಕ್ಷಿಸುತೆ
ಮೆರೆದೆ ಸತ್ಕರುಣಾಮೃತಾಬ್ಧಿ ಪೀಯೂಷಕರ ಗುರುಸಿದ್ಧಲಿಂಗೇಶ್ವರ ॥

ಪರಮುಕಗ್ಗೆರೆಯ ಪೂದೋಟದೊಳು ತಾಂ ತಪವ
ವಿರಚಿಸುತೆ ಕುಳಿತಿರಲು ತನ್ನ ಸುತ್ತಂ ಪುತ್ತು
ಪರಿವೇಷ್ಟಿಸಿರಲದರ ಮೇಲೊಂದು ಧೇನು ಪಾಲ್ಗರೆವುತಿರೆ ತನ್ನಮನವ
ಪರಮನೊಳಗೈಕ್ಯಾನುಸಂಧಾನದಿಂ ನಿಲಿಸಿ
ಗುರುತೋಂಟದಾರ್ಯನಿವನೆಂಬ ನಾಮವನಾಂತು
ಮೆರೆವುತ್ತ ನಂಬ್ಯಣ್ಣನತಿಭಕ್ತಿಗೊಲಿದೆಯ್ಯ ಗುರುಸಿದ್ಧಲಿಂಗೇಶ್ವರ ॥

—ಮಾಗಡಿ ವೀರಪ್ಪಶಾಸ್ತ್ರಿಗಳು

# ಈ ಸಂಚಿಕೆಯಲ್ಲಿ







# ಶ್ರೀವಾಣಿ

' ಅಹಿಂಸಾ ಪರಮೋಧರ್ಮಃ '

ಭಾವನಾತ್ಮಕವಾದ ಎಲ್ಲ ಭಾರತೀಯ ಧರ್ಮಗಳ ಪ್ರಮುಖ ಸಿದ್ಧಾಂತಗಳಲ್ಲಿ ಒಂದು. ಇದನ್ನೇ ವಚನ ಶಾಸ್ತ್ರ ಧರ್ಮದಲ್ಲಿ ಬಸವಣ್ಣನವರು ' ಕೊಲಬೇಡ " ಎಂದು ಕರೆದರು. ಮನುಷ್ಯತ್ವ ನಿರ್ಣಯದಲ್ಲಿ ಪ್ರಮಾಣ ಎಂದರು. ಜಾತಿಯಿಂದ ಹೊಲೆತನ ಪ್ರಾಪ್ತವಾಗುವುದಿಲ್ಲ. ಪರಂತು ಹಿಂಸೆಯಿಂದ ಹೊಲೆತನವೂ, ಅಹಿಂಸೆಯಿಂದ ಹರತನವೂ ಪ್ರಾಪ್ತವಾಗುತ್ತದೆಂದು ಬೋಧಿಸಿದರು.

'ಕೊಲ್ಲುವವನೆ ಮಾದಿಗನು
ಹೊಲಸು ತಿಂಬುವ ಹೊಲೆಯ! ಎಂದು

ಈ ಕೊಲೆ, ಹೊಲೆತನಗಳಿಗೆ ಮಾನವನೆದೆಯ ಗುಹೆಯಲ್ಲಿ ತುಂಬಿರುವ ಆಶಾದಾಹ, ಅವಿವೇಕ ಹಾಗೂ ಮೋಹಾಂಧತೆಗಳೇ ಕಾರಣ. ಇಂಥ ಹೊಲೆತನಕ್ಕೆ ಹೊದ್ದದೆ ಸಕಲಜೀವರಿಗೆ ಲೇಸನ್ನು ಬಯಸುವವನೇ ಶರಣ, ಮಾನವ ಶ್ರೇಷ್ಠ.

"ಸಿದ್ಧಗಂಗಾ" ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾ ಮಠ-572104
ತುಮಕೂರು ಜಿಲ್ಲೆ.

ಪ್ರಧಾನ ಸಂಪಾದಕರು
ಹಂ॥. ಚನ್ನಪ್ಪ ಎರೇಸೀಮೆ

* * *
ಸಹ ಸಂಪಾದಕರು
ಪಿ. ಎನ್. ಚಂದ್ರಶೇಖರಯ್ಯ
ಬಸವರಾಜು

* * *
ಜಾಹೀರಾತು ವಿಭಾಗ
ಎಂ. ರೇಣುಕಾರಾಧ್ಯ

* * *
ಪ್ರಸಾರ ವಿಭಾಗ
ಆರ್. ಎಸ್. ಮಲ್ಲೇಶಪ್ಪ

* * *
ಪ್ರಕಾಶಕರು
ಹೆಚ್. ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *
ಮುದ್ರಕರು
ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ
ಮುದ್ರಣಾಲಯ

* * *
ಪ್ರಕಟಣೆಯ ಸ್ಥಳ
ಶ್ರೀ ಸಿದ್ಧಗಂಗಾ ಕ್ಷೇತ್ರ

ಚಂದಾ ವಿವರ
ವಾರ್ಷಿಕ ಚಂದಾ 15-00 ರೂ
ಆಜೀವ ಸದಸ್ಯತ್ವ 151-00 ರೂ

## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ. ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕಥೆ, ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾಜನೀತಿ, ಧರ್ಮ, ದರ್ಶನ, ಇತಿಹಾಸ ವೈಚಾರಿಕ, ಚಿಂತನ, ನಗೆಬರೆಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್ ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗುಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಚೀಟಿಯನ್ನು ಲಗತ್ತಿಸಿರಬೇಕು. ಲೇಖನಗಳು ಆಕಸ್ಮಾತ್ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶವಿಲ್ಲ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನದ ಪ್ರಕಟಣೆಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿ ಪಡಿಸಿರುವ ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. ಸ್ಥಿರ ಶೀರ್ಷಿಕೆ ಪಡೆಯಲಿಚ್ಛಿಸುವ ಬರಹಗಾರರಿಗೆ ಆದ್ಯತೆ ಕೊಡಲಾಗುವುದು.

"ಸಂಪಾದಕರು"
'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾ ಕ್ಷೇತ್ರ-572104
ತುಮಕೂರು ಜಿಲ್ಲೆ.
ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.



# ಸಂಪಾದಕೀಯ

ವ್ಯಕ್ತಿ ಸ್ವಾತಂತ್ರ್ಯ–ವಾಕ್ ಸ್ವಾತಂತ್ರ್ಯಗಳು ಪ್ರಜಾಪ್ರಭುತ್ವ ನೀತಿಯಲ್ಲಿನ ಮಾನವನ ಹಕ್ಕುಗಳು ನಿಜ. ಒಂದು ಸರಕಾರವನ್ನು ಬಹುಮತದಿಂದ ಆರಿಸಿ ಗದ್ದುಗೆಗೇರಿಸಿದ ಮೇಲೆ ಅದರ ನೀತಿಯೊಡನೆ ಹೊಂದಿಕೊಂಡು ಅದು ಯೋಗ್ಯ ರೀತಿಯಿಂದ ಕೆಲಸಮಾಡಿಕೊಂಡು ಹೋಗಲು ಜನತೆಯೆಲ್ಲ ಸಹಕರಿಸಬೇಕಾಗುತ್ತದೆ. ಇದರಲ್ಲಿ ವ್ಯಷ್ಟಿ–ಸಮಷ್ಟಿ ನೀತಿಗಳೆರಡೂ ಸಮತೋಲನದಲ್ಲಿ ಸಾಗಿದಾಗಲೇ ಗಲಭೆ ಗದ್ದಲಗಳಿರುವುದಿಲ್ಲ. ಹಾಗಾಗದಿದ್ದಾಗ ಗದ್ದಲ ಪ್ರಾರಂಭವಾಗುತ್ತದೆ.

ಇತ್ತೀಚಿನ ಭಾರತದ ಆಡಳಿತ ರೀತಿಯಲ್ಲಿ ಎಲ್ಲ ಕಡೆಗೂ ಬೆಳೆಯುತ್ತಿರುವ ಬಹು ದೊಡ್ಡ ದೋಷವೆಂದರೆ ಪ್ರಸಂಗದಲ್ಲಿ ತನಗೆ ಬೇಕಾದ ಕೆಟ್ಟವರನ್ನು ಹೊಗಳುವ, ಬೇಡವಾದ ಒಳ್ಳೆಯವರನ್ನು ತೆಗಳುವ ಅಪ್ರಬುದ್ಧ ರಾಜಕಾರಣಿಗಳ ದೊಂಬರಾಟದ ಪ್ರದರ್ಶನ. ಒಂದು ಪಕ್ಷದವರು ಅಧಿಕಾರಕ್ಕೆ ಏರಿದ ಮರುದಿನವೇ ಅವರನ್ನು ಕೆಳಗಿಳಿಸುವುದು ಹೇಗೆ? ಅವರನ್ನು ಕೆಳಗಿಳಿಸಿ ತಾವು ಮೇಲೇರಿ ಅಧಿಕಾರ ಸೂತ್ರ ಹಿಡಿಯಲು ಯಾವ ಯಾವ ತಂತ್ರ, ಮೋಡಿ, ಪ್ರಚಾರ ಕೈಕೊಳ್ಳಬೇಕೆಂಬ ಆಲೋಚನೆ ಮಾಡುತ್ತಿರುವುದು ಕಂಡುಬರುತ್ತಿದೆ. ಅದಕ್ಕಾಗಿ ಇವರಿಗೆ ಪ್ರಚಾರ ಮಾಧ್ಯಮವೆಂದರೆ ಪತ್ರಿಕೆಗಳು. ಕೆಲವು ಪತ್ರಿಕೆಗಳೂ ನಿಷ್ಪಕ್ಷಪಾತಕ್ಕಿಂತ ಹೆಚ್ಚಾಗಿ ಪಕ್ಷಪಾತವನ್ನೇ ಅನೇಕ ಕಾರಣಗಳಿಂದ ತಮ್ಮ ಮೂಲ ಧ್ಯೇಯವನ್ನಾಗಿರಿಸಿಕೊಂಡುದನ್ನು ಜನತೆ ಸೂಕ್ಷ್ಮದೃಷ್ಟಿಯಿಂದ ಗಮನಿಸುತ್ತದೆ. ಅವುಗಳ ಮೂಲಕ ಸರಕಾರದ ಮೇಲೆ ತಪ್ಪು ಹೊರಿಸುವ ನೀತಿಯನ್ನೇ ಪ್ರಚಾರಾಸ್ತ್ರವಾಗಿ ಬಳಸಿ ಸರಕಾರ ಕೆಲಸ ಮಾಡದಂತೆ ಮಾಡುವುದು ಕಂಡುಬರುತ್ತಿದೆ. ಸರಕಾರದ ನೀತಿಗೆ ಅದು ಪ್ರಚಾರಕೊಡದೆ, ಸರಕಾರದ ಧ್ವನಿಯನ್ನು ಬಿತ್ತರಿಸದೆ ತಾವು ಯಾವ ಪ್ರಲೋಭನಕ್ಕೊಳಗಾಗಿರುವರೋ ಅದು ಆತ್ಮಸಾಕ್ಷಿಗೆ ವಿರೋಧವಾದರೂ ಅದಕ್ಕೆ ಬಣ್ಣಕಟ್ಟಿ ಪ್ರಚಾರಮಾಡಿ ಜನತೆಗೆ ಸರಕಾರದಲ್ಲಿರುವ ನಂಬಿಕೆಯನ್ನು ಕಡಿಮೆ ಮಾಡಲು ಪ್ರಯತ್ನಿಸುತ್ತಾರೆ. ಹೀಗಾಗಿ ಸರಕಾರ ಅವಹೇಳನಕ್ಕೊಳಗಾಗಿ ಧೃತಿಗೆಡುತ್ತದೆ. ಧೃತಿಗೆಟ್ಟ ಸರಕಾರ ಧೈರ್ಯವಾಗಿ ಏನನ್ನೂ ಮಾಡಲು ಅಳುಕುತ್ತದೆ. ಮಾತೆತ್ತಿದರೆ ಮುಷ್ಕರ–ಉಪವಾಸ, ದೊಂಬಿ, ಗುಂಪುಗಾರಿಕೆ, ಸಾರ್ವಜನಿಕರಿಗೆ ನಷ್ಟಗೊಳಿಸುವ ಕಾರ್ಯಾಚರಣೆ–ಇಂಥವೆಲ್ಲವನ್ನು ದಿನದಿನವೂ ಓದಿ, ಕೇಳಿ ನೆಮ್ಮದಿಯಿಂದ ಜೀವಿಸಬೇಕೆಂಬುವವರಿಗೆ, ರಾಷ್ಟ್ರೀಯ ಜೀವನಗುಣಮಟ್ಟವನ್ನು ಹೆಚ್ಚಿಸಿ ಸುಖಶಾಂತಿಗಳಿಂದ ಬದುಕಬೇಕೆನ್ನುವ ಸಂಪನ್ನರಿಗೆ

(50 ನೇ ಪುಟ ನೋಡಿ)

## ಸಿದ್ಧಗಂಗಾ ಶ್ರೀಗಳವರ ಸಮ್ಮುಖದಲ್ಲಿ ಆದಿ ಚುಂಚನಗಿರಿ ಶ್ರೀಗಳವರಿಗೆ ಬೀಳ್ಕೊಡುಗೆ ಸಮಾರಂಭ

ಬೆಂಗಳೂರಿನ ವಿಜಯನಗರದಲ್ಲಿ ತಾ. 28-7-83 ನೆಯ ದಿನಾಂಕ ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷ ಶ್ರೀ. ನಿ. ಪ್ರ. ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ನೇತೃತ್ವದಲ್ಲಿ 29-8-83 ರಂದು ವಿದೇಶಕ್ಕೆ ತೆರಳಲಿರುವ ಆದಿಚುಂಚನಗಿರಿಯ ಶ್ರೀ ಬಾಲಗಂಗಾಧರ ಮಹಾಸ್ವಾಮಿಗಳವರಿಗೆ ಬೀಳ್ಕೊಡುಗೆ ಸಮಾರಂಭ ವೈಭವ ಯುತವಾಗಿ ನೆರವೇರಿತು. ಸಮಾರಂಭದಲ್ಲಿ ಸಿರಿಗೆರೆ ಜಗದ್ಗುರು ಶಿವಮೂರ್ತಿ ಶಿವಾಚಾರ್ಯ ಸ್ವಾಮಿಗಳು ಭಾಗವಹಿಸಿದ್ದರು. ಸಿದ್ಧಗಂಗಾ ಶ್ರೀಗಳು ತಮ್ಮ ಅನುಗ್ರಹ ಭಾಷಣದಲ್ಲಿ. "ಆದಿಚುಂಚನಗಿರಿ ಮಹಾಸಂಸ್ಥಾನದ ಜಗದ್ಗುರು ಶ್ರೀ ಬಾಲಗಂಗಾಧರ ಸ್ವಾಮಿಗಳು ಧಾರ್ಮಿಕ ಪ್ರಸಾರದೃಷ್ಟಿಯಿಂದ ಪ್ರವಾಸ ಮಾಡುತ್ತಿರುವುದು ನಮಗೆ ಅತೀವ ಹರ್ಷ ತಂದಿದೆ. ಕಳೆದ 9 ವರ್ಷಗಳಿಂದ ಆದಿಚುಂಚನಗಿರಿ ಶ್ರೀಗಳವರು ಮಾಡುತ್ತಿರುವ ಸಮಾಜಸೇವೆಯನ್ನು ಎಲ್ಲರೂ ಮುಕ್ತಕಂಠದಿಂದ ಪ್ರಶಂಸೆ ಮಾಡಬೇಕಾದುದು. ಉತ್ಸಾಹದಿಂದ ಅವರು ವಿದ್ಯಾಕ್ಷೇತ್ರದಲ್ಲಿ ಅನೇಕ ರಚನಾತ್ಮಕ ಕಾರ್ಯ ಮಾಡುತ್ತಿರುವುದನ್ನು ಗಮನಿಸಿದ ನಮಗೆ ಅತೀವ ಹರ್ಷವಾಗಿದೆ. ಇಂದು ಭಾರತದ ಧರ್ಮಾಧಿಕಾರಿಗಳ ಜವಾಬ್ದಾರಿ ಹೆಚ್ಚಾಗಿದೆ. ಜನತೆಯಲ್ಲಿ ಧರ್ಮಬುದ್ಧಿ ನಶಿಸಿ ಹೋಗುತ್ತಿರುವುದರ ಕಹಿ ಫಲವನ್ನು ಸಮಾಜ ಇಂದು ಅನುಭವಿಸಬೇಕಾಗಿ ಬಂದಿರುವುದು ದುರದೃಷ್ಟಕರ. ಭಾರತದ ಜವಾಬ್ದಾರಿಯಂತೂ ಇಂದು ಅಧಿಕವಾಗಿದೆ. ಭಾರತದ ಉದ್ಧಾರ-ಜಗತ್ತಿನ ಉದ್ಧಾರ. ಭಾರತದ ನಾಶ ಜಗತ್ತಿನ ನಾಶ. ಭಾರತದ ಧರ್ಮಬುದ್ಧಿ ನಾಶವಾದರೆ ಜಗತ್ತೇ ನಾಶವಾದಹಾಗೆ." ಇತ್ಯಾದಿ ಅಭಿಪ್ರಾಯಗಳ ವಿಶ್ಲೇಷಣೆ ಮಾಡುತ್ತ ಶ್ರೀ ಬಾಲಗಂಗಾಧರ ಸ್ವಾಮಿಗಳವರ ವಿದೇಶಪ್ರವಾಸ ಯಶಸ್ವಿಗೊಳ್ಳಲೆಂದು ಹಾರೈಸಿದರು. ಶ್ರೀ ಬಾಲಗಂಗಾಧರ ಸ್ವಾಮಿಗಳು. "ಪರಮ ಪೂಜ್ಯರೂ, ತಪಸ್ವಿಗಳೂ ದಾಸೋಹ ಮೂರ್ತಿಗಳೂ ಆದ ಶ್ರೀ ಶಿವಕುಮಾರ ಸ್ವಾಮಿಗಳ ಸಮ್ಮುಖದಲ್ಲಿ ಸಭೆ ಸೇರಿ ನಮಗೆ ಭಕ್ತಕೋಟಿ ಶುಭ ಹಾರೈಸುತ್ತಿರುವುದು ಶುಭಸಂಕೇತ. ನಮ್ಮ ಪ್ರವಾಸ ಕಾರ್ಯದಲ್ಲಿ ಯಶಸ್ವಿಯನ್ನು ಸಾಧಿಸುತ್ತೇನೆಂಬ ನಂಬಿಕೆ ದೃಢಪಟ್ಟಿದೆ" ಯೆಂದು ತಿಳಿಸಿದರು. ಸಭೆಯಲ್ಲಿ ಕರ್ನಾಟಕ ವಿಧಾನಸಭೆಯ ಸ್ಪೀಕರ್ ಶ್ರೀ ಚಂದ್ರೇಗೌಡರು ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷ ಶ್ರೀ ಜಿ. ನಾರಾಯಣ್ ಅವರು, ಡಾ. ಅನಂತ್ ರಂಗಾಚಾರ್, ಪಂಡಿತ ಪದ್ಮನಾಭಶರ್ಮಾ, ತರಳಬಾಳು ಜಗದ್ಗುರು ಶ್ರೀ ಶಿವಮೂರ್ತಿ ಶಿವಾಚಾರ್ಯ ಸ್ವಾಮಿಗಳೂ ಶುಭ ಹಾರೈಸಿದರು.

ಪ್ರಾರಂಭದಲ್ಲಿ ಶ್ರೀಮತಿ ಸರ್ವಮಂಗಳಾ ಶಾಣ್ ಅವರ ಪ್ರಾರ್ಥನೆ, ಶ್ರೀ ಎಂ. ಪಾಕಪಣ್ಣನವರ ಸ್ವಾಗತ, ಡಾ॥ ಹೆಚ್. ಎಲ್. ತಿಮ್ಮೇಗೌಡರ ವಂದನಾರ್ಪಣೆಯೊಡನೆ ಕಾರ್ಯಕ್ರಮ ಮುಕ್ತಾಯಗೊಂಡಿತು. ಸಂ.



## 'ಶ್ರಾವಣ ಬಂತು ನಾಡಿಗೆ'

—ಪ್ರೊ. ಎಸ್. ಎಸ್. ಭೂಸರೆಡ್ಡಿ.

ಶ್ರಾವಣ ಮಾಸ ಮತ್ತೆ ಮನೆಯ ಬಾಗಿಲಿಗೆ ಬಂದಿದೆ. ಜನತೆಯ ಮನದ ಕೊಳೆಯನ್ನು ತೊಳೆಯಲು ಮರಳಿ ಮರಳಿ ಬರುತ್ತಿದೆ. ಇದೊಂದು ಸಹಜವಾದ ಸೃಷ್ಟಿಚಕ್ರ. ಅದು ತಿರುಗುತ್ತಲೇ ಇರುತ್ತದೆ. ಶ್ರಾವಣ ಮಾಸ ವೀರಶೈವರಿಗೆ ಅದೇಕೆ ಭಾರತೀಯರಿಗೆ ಅತ್ಯಂತ ಪರಮ ಪವಿತ್ರವಾದ ಪುಣ್ಯದ ತಿಂಗಳು, ಮುಸಲ್ಮಾನರಿಗೆ 'ರಮಜಾನ" ಹೇಗೋ ಹಾಗೆ ವೀರಶೈವವರಿಗಂತೂ ಅತ್ಯಂತ ಮಹತ್ವದ ಮಾಸವಾಗಿದೆ. ನಾಡಿನಾದ್ಯಂತ ಮನೆ ಮಠಗಳಲ್ಲಿ ದೇವಮಂದಿರಗಳಲ್ಲಿ ಸಡಗರ, ಸಂಭ್ರಮ; ಪುರಾಣ ಪುಣ್ಯ ಕಥೆಗಳ ಶ್ರವಣ. 'ಮಹಾತ್ಮರಂ ನೆನೆಯುವುದೇ ಘನ ಮುಕ್ತಿ ಪದಂ' ಎಂಬ ಸೂಕ್ತಿಯೂ ಅರ್ಥಪೂರ್ಣವಾಗಿದೆ. ಅಂತಯೇ ಬಸವಾದಿ ಪ್ರಮಥ ಪುಂಗವರು 'ಕಿವಿಯಲ್ಲಿ ನಿಮ್ಮ ಕೀರುತಿ ತುಂಬಿ' ಎಂದು ಮುಕ್ತಕಂಠದಿಂದ ಹಾಡಿಕೊಂಡಿದ್ದಾರೆ; 'ನೀನು ಒಲಿಯದಿದ್ದರೆ ಒಲಿ ಒಲಿಯದಿದ್ದರೆ ಮಾಣು, ನಾ ನಿನ್ನ ಹಾಡಿದಲ್ಲದೆ ಸೈರಿಸಲಾರೆನು' ಎಂದು ವೀರ ವೀರಾಗಿಣಿ ಅಕ್ಕಮಹಾದೇವಿಯ ಉಕ್ತಿಯನ್ನು ಸ್ಮರಿಸಬೇಕು.

ಸುತ್ತಲೂ ಹಚ್ಚಹಸಿರು ಸೃಷ್ಟಿಯಲ್ಲಿ ವಿನೂತನ ಚೈತನ್ಯದ ಚಿಲುಮೆ ಚಿಮ್ಮುತ್ತಿದೆ. ಭೂರಮಣಿ ಹಚ್ಚಹಸಿರ ಸೀರೆಯನ್ನುಟ್ಟುಕೊಂಡು ಬೆಳೆಯೆಂಬ ಉಡಿಯನ್ನು ತುಂಬಿಕೊಂಡು ನಿಂತಿದ್ದಾಳೆ. ಸೃಷ್ಟಿಯ ಸೊಬಗು ರಮ್ಯಮನೋಹರವಾಗಿದೆ. ಎಲ್ಲೆಲ್ಲಿ ನೋಡಿದರೂ ಉತ್ಸಾಹ ಉಕ್ಕೇರಿದೆ. ಧಾರಾಕಾರ ಮಳೆಯಿಂದ ಭೂಮಿತಾಯಿ ತೃಪ್ತಿಗೊಂಡಿದ್ದಾಳೆ. ಒಕ್ಕಲಮಕ್ಕಳಿಗೆ ಇನ್ನಿಲ್ಲದ ಬಿಡುವು. ಈ ಸುಸಂದರ್ಭದಲ್ಲಿ ಅವರ ಹೃದಯ ಮಂದಿರದಲ್ಲಿ ಜ್ಞಾನಜ್ಯೋತಿ ಹೊತ್ತಿಸುವ ಭಕ್ತಿಯ ಕುಸುಮ ಅರಳಿಸುವ ಶರಣರ ಶಿವಯೋಗಿಗಳ ಪುಣ್ಯ ಕಥೆಗಳನ್ನು ಕೇಳುವ ಶರಣ ಸಂಸ್ಕೃತಿಯ ಸೌರಭ ಸೂಸುವ ಪುಣ್ಯ ಕಾರ್ಯಗಳನ್ನು ನಮ್ಮ ನಾಡಿನ ನಾಲ್ಕೂ ನಿಟ್ಟಿನಲ್ಲಿರುವ ಮಠ ಮಾನ್ಯಗಳು ಮಾಡುತ್ತಲೇ ಬಂದಿವೆ. ಈ ಉಜ್ವಲ ಪರಂಪರೆ ಅಂದಿನಿಂದ ಇಂದಿನವರೆಗೆ ನಡೆಯುತ್ತಲೇ ಇದೆ. ಅಖಂಡ ಒಂದು ತಿಂಗಳ ಪರ್ಯಂತರ ಶ್ರವಣ ಮಾಡುವ ಮಹಾಭಾಗ್ಯ ದೊರೆಯುತ್ತಿದೆ. 'ಹಳೇಬೇರು ಹೊಸ ಚಿಗುರು' ಎಂಬಂತೆ ಹಳೆಯದನ್ನು ತ್ಯಗಳದೆ ಒಳ್ಳೆಯದನ್ನು ಸ್ವೀಕರಿಸುವ ಮನೋಧರ್ಮ ನಮ್ಮಲ್ಲಿ ರೂಪಿಸಿಕೊಳ್ಳುವ ಸುವರ್ಣಮಯ ಅಮೃತ ಸಮಯವಿದು.

(49 ನೇ ಪುಟ ನೋಡಿ)

# ಕ್ಷೇತ್ರವಾರ್ತೆ

—ಪಿ. ಎಸ್. ಸಿ

ತಾ|| 9-7-83 ರ ಸಂಜೆ ಶ್ರೀ ಕ್ಷೇತ್ರದಲ್ಲಿ ಸಂಯುಕ್ತ ವಿದ್ಯಾರ್ಥಿಸಂಘದ ಆರಂಭೋತ್ಸವ ಸಮಾರಂಭವನ್ನು ಏರ್ಪಡಿಸಲಾಗಿತ್ತು. ಸಮಾರಂಭದ ಉದ್ಘಾಟನೆಯನ್ನು ಕರ್ನಾಟಕ ರಾಜ್ಯದ ನಗರಾಡಳಿತ ಮತ್ತು ಪೌರಭಿವೃದ್ಧಿ ಸಚಿವರಾದ ಮಾನ್ಯ ಶ್ರೀ.ಎಂ ಚಂದ್ರಶೇಖರ್‌ರವರು ನೆರವೇರಿಸಿದರು. ಸಚಿವರು ಮಾತನಾಡುತ್ತಾ, ಗ್ರಾಮಾಂತರ ಬಡಜನತೆಯನ್ನು ಉದ್ಧಾರ ಮಾಡುವ ಏಕೈಕ ಮಾರ್ಗ ವಿದ್ಯೆ. ಆಮೂಲಕ ಜನತೆಯ ಅಜ್ಞಾನವನ್ನು ಹೋಗಲಾಡಿಸಲು ಜ್ಞಾನ ಪ್ರಸಾರ ಕಾರ್ಯವನ್ನು ಪೂಜ್ಯ ಸ್ವಾಮೀಜಿಯವರು ಕೈಗೂಂಡು ಬಡಜನತೆಯ ಉದ್ಧಾರ ಮಾಡುತ್ತಿದ್ದಾರೆ. ಶ್ರೀ ಮಠವು ಪ್ರಾಚೀನ ಗುರುಕುಲ ಪದ್ಧತಿಯನ್ನನುಸರಿಸಿ ಇಂದುಮಾರ್ಗದರ್ಶನ ಮಾಡುತ್ತಿದೆ. ಮಕ್ಕಳ ಮನಸ್ಸಿನಲ್ಲಿ ಪರಿಣಾಮಕಾರಿಯಾದ ಪರಿವರ್ತನೆ ಯಾಗಬೇಕಾದರೆ ಚಿಕ್ಕಂದಿನಲ್ಲಿ ಸುಸಂಸ್ಕೃತ ಮಾರ್ಗದರ್ಶನ ಅಗತ್ಯ. ಅದುಯೋಗ್ಯ ಭವಿಷ್ಯಕ್ಕೆ ನಾಂದಿಯಾದೀತು ಸ್ವಾಮೀಜಿಯವರುಕೊಡುವ ಈ ಶಿಕ್ಷಣ ಮುಂದೆ ಉತ್ತಮ ಫಲ ಕೊಡುತ್ತದೆ ಎಂದು ಹೇಳಿದರು.

ತುಮಕೂರು ವಿಧಾನ ಸಭಾಧ್ಯಕ್ಷರಾದ ಶ್ರೀ ಲಕ್ಷ್ಮೀನರಸಿಂಹಯ್ಯನವರು ಶ್ರೀ ಶ್ರೀ ಸ್ವಾಮೀಜಿಯವರು ದಿನವಹಿ ಉಪದೇಶಿಸುವ ಉತ್ತಮವಾದ ಹಿತೋಕ್ತಿ. ಉಪದೇಶ ಮತ್ತು ನೀತಿ ಕಥೆಗಳನ್ನು ಕೇಳಿ ನಿಮ್ಮ ಜೀವನವನ್ನು ಉತ್ತಮಗೊಳಿಸಿಕೊಳ್ಳಿ ಎಂದು ಮಕ್ಕಳಿಗೆ ಹಿತೋಕ್ತಿ ಹೇಳಿದರು ನೆಲಮಂಗಲದ ಕ್ಷೇತ್ರದ ವಿಧಾನ ಸಭಾಸದಸ್ಯರಾದ ಶ್ರೀಸತ್ಯನಾರಾಯಣರವರು ಮಾತನಾಡುತ್ತಾ ಪೂಜ್ಯರ ಮಾರ್ಗದರ್ಶನವನ್ನು ಅನುಸರಿಸಿ, ದೇಶಕ್ಕೆ ಉತ್ತಮ ಪ್ರಜೆಗಳಾಗಿರಿ. ಶ್ರೀ ಶ್ರೀ ಗಳವರ ಸೇವೆಯನ್ನು ಕೃತಜ್ಞತೆಯಿಂದ ಸ್ಮರಿಸುವ ವಿವೇಕಿಗಳಾಗಿ" ಎಂದು ಮಕ್ಕಳಿಗೆ ತಿಳಿವಳಿಕೆ ಕೊಟ್ಟರು. ಕೃಷಿಸಚಿವರಾದ ಶ್ರೀ ಎಸ್ ರೇವಣ್ಣನವರು ಮಾತನಾಡುತ್ತಾ ಪೂಜ್ಯ ಸ್ವಾಮೀಯವರು ನಾಡಿನ ಒಂದು ದಿವ್ಯ ಚೈತನ್ಯ. ಅವರ ಕಾರ್ಯ ಬಾಹುಳ್ಯ ಅಪಾರವೆಂದು ಮೆಚ್ಚಿಗೆ ವ್ಯಕ್ತಪಡಿಸಿದರು, ಶ್ರೀ ಸ್ವಾಮೀಜಿವರು ಸಭೆಯನ್ನು ಆಶೀರ್ವದಿಸುತ್ತಾ. ಶಿಕ್ಷಣದಲ್ಲಿ ಗುಣಮಟ್ಟ ಸುಧಾರಿಸಿಲ್ಲ. ವಿದ್ಯಾಸಂಸ್ಥೆಗಳು ದಿನೇ ದಿನೇ ಬೆಳೆಯುತ್ತಿವೆ. ಈ ದಿಸೆಯಲ್ಲಿ ಶಿಕ್ಷಕರು ಪೋಷಕರು ಸರಕಾಕದವರು ವಿಶೇಷ ಆಸಕ್ತಿವಹಿಸಬೇಕು. ಶಿಕ್ಷಣದಲ್ಲಿ ಸಮಗ್ರವಾದ ಸುಧಾರಣೆ ಇಂದು ಅಗತ್ಯವಾಗಿದೆ. ಸುಧಾರಣಾ ಸಮಿತಿಗಳು ತಜ್ಞರಿಂದ ಕೂಡಿರದೆ ಕೆಲವು ರಾಜಕೀಯಕ್ಕೆ ಒಳಗಾಗಿ ಸಮಿತಿಗಳು ತೃಪ್ತಿಕರವಾಗಿ ಸಲಹೆಗಳನ್ನು ಕೊಡಲು ಸಾಧ್ಯವಾಗುತ್ತಿಲ್ಲ. ಈ ಅಂಶಗಳನ್ನು ಸರಕಾರ ಮನಗಂಡು ಸೂಕ್ತಕ್ರಮ ಕೈಗೊಳ್ಳಬೇಕಾಗುತ್ತದೆ. ಈ ಕ್ರಮ ಇತರ ರಾಜ್ಯಗಳಿಗೆ ಮಾದರಿಯಾಗಲೆಂದು ಹಾರೈಸಿದರು.



# ಸಿದ್ಧಗಂಗಾ ಕ್ಷೇತ್ರ ಮತ್ತು ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು

(1970 ರಲ್ಲಿ ಬೆಂಗಳೂರಿನ ಉತ್ಥಾನ ಪತ್ರಿಕೆಯ ಸಂಪಾದಕರು ಶ್ರೀ ಕ್ಷೇತ್ರಕ್ಕೆ ಬಂದು ಶ್ರೀಗಳವರ ಸಂದರ್ಶನ ಪಡೆದು ಆ ವರ್ಷದ ಮೇ ಸಂಚಿಕೆಯಲ್ಲಿ ಪ್ರಕಟಿಸಿದ ಲೇಖನವನ್ನಿಲ್ಲಿ ನಮ್ಮ ಓದುಗರ ಅವಗಾಹನೆಗೆ ಕೊಡಲಾಗಿದೆ—ಸಂ.)

"ಕಾಯಕವೆ ಕೈಲಾಸ", "ದೇವನೊಬ್ಬ ನಾಮ ಹಲವು"–ಶರಣ ಹೃದಯದಿಂದ ಹೊಮ್ಮಿದ ಅಮೃತವಾಣಿ; ಲೋಕಕ್ಕೆ ದಾರಿದೀಪವಾಗುವ ಸತ್ವಶಾಲಿ ಸೂತ್ರ.

ಈ ಮಾತುಗಳನ್ನು ಕಂಡದ್ದು ಯಾವ ಪುಸ್ತಕದಲ್ಲೂ ಅಲ್ಲ; ಬೆಟ್ಟದ ಕೋಡುಗಲ್ಲುಗಳ ಮೇಲೆ; ಈ ನಿಟ್ಟಿನಿಂದ ಆ ನಿಟ್ಟಿನವರೆಗೆ ಕಣ್ಣು ಕಾಣುವಷ್ಟು ದೂರದಿಂದ ಯಾತ್ರಿಕನ ನೋಟವನ್ನು ಸೆಳೆಯುವ ಶಿಲಾಲಿಪಿ ಜೊತೆಗೆ ಅದರ ನಡುವೆ ಎದ್ದುನಿಂತು ಎತ್ತರದಲ್ಲಿ ಆಡುತ್ತಿರುವ ಭಗವಾನ್‌ಧ್ವಜ—ನಭೋವಿಹಾರಿಯಾಗಿ; ವಿರಕ್ತಿಯ ಸಾತ್ವಿಕ ಸಂಕೇತವಾಗಿ; ಆತ್ಮವನ್ನು ಇಲ್ಲಿಂದ ಅಲ್ಲಿಗೆ ಎತ್ತುವ ಶಕ್ತಿಯಾಗಿ.

ಇದು ಸಿದ್ಧಗಂಗಾಕ್ಷೇತ್ರ; ಸಂತಮಹಂತರ ತಪೋಭೂಮಿ; ಕಾಯಕದ ತತ್ತ್ವವನ್ನು ದಿನದ ಬದುಕಿನಲ್ಲಿ ಆಚರಿಸಿ ತೋರಿಸುತ್ತಿರುವ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳ ನೆಲೆಬೀಡು. ಕ್ಷೇತ್ರವನ್ನು ಸಮೀಪಿಸುತ್ತಲೇ ಆ ಪಾವನ ಪರಿಸರದಲ್ಲಿ ಮನಸ್ಸು ಮಗ್ನ. ಅಂದಿನಿಂದ ಇಂದಿನವರೆಗಿನ ಅದರ ಐತಿಹ, ಅನುಭವಕ್ಕೆ ಗೋಚರ.

ಆರುನೂರು ವರ್ಷಗಳ ಹಿಂದಿನ ಮಾತು: ಶ್ರೀ ಗೋಸಲ ಸಿದ್ಧೇಶ್ವರರೆಂಬ ಯತಿವರ್ಯರು ಇಲ್ಲಿ ತಪಸ್ಸು ಮಾಡುತ್ತಿದ್ದರು. ಮಠವನ್ನು ಸ್ಥಾಪಿಸಿದವರು ಅವರೇ. ಆ ತರುವಾಯ ಈ ಬೆಟ್ಟದ ಗುಹೆಗಳಲ್ಲಿ ಎಷ್ಟೋ ಜನ ಸಂತರು ತಪೋಮಗ್ನರಾಗಿದ್ದರು. ಅವರಲ್ಲೊಬ್ಬ ವೃದ್ಧರಿಗೆ ಇರುಳಿನಲ್ಲಿ ನೀರಡಿಕೆಯಾಗಿ ನಿತ್ರಾಣ ಕಂಡಿತು. ಅವರು ಗೋಸಲ ಸಿದ್ಧೇಶ್ವರರನ್ನು ಸ್ಮರಿಸಲು ಅವರು ವೈದೋರಿ ಬಂಡೆಯನ್ನು ಕೈಯಿಂದ ಬಗಿದು ನೀರು ತರಿಸಿ ತಪಸ್ಸಿಗೆ ಪ್ರಾಣದಾನ ಮಾಡಿದರು. ಆಗ ಸಿದ್ಧೇಶ್ವರರ ತಪಃಶಕ್ತಿಯಿಂದ ಉದ್ಭವವಾದದುದೇ ಸಿದ್ಧಗಂಗೆ. ಅಂದಿನಿಂದಲೂ ಆ ಹೆಸರಿನಿಂದಲೇ ಈ ಕ್ಷೇತ್ರ ಪ್ರಸಿದ್ಧಿ. ಕ್ಷೇತ್ರದೈವವಾದ ಸಿದ್ಧಲಿಂಗೇಶ್ವ

ರನೂ ಗಂಗಾಮಾತೆಯೂ ನೆಲಸಿ ಪೂಜೆಗೊಳ್ಳುತ್ತಿರುವುದೂ ಇಲ್ಲೇ.

ಶ್ರೀ ಗೋಸಲ ಸಿದ್ಧೇಶ್ವರರ ಕಾಲಾನಂತರ ಈ ಮಠದ ಗುರುಪರಂಪರೆಯಲ್ಲಿ ಮುಖ್ಯರಾದವರು ಶ್ರೀ ರುದ್ರಸ್ವಾಮಿಗಳು (೧೮೨೦-೧೮೫೩), ಶ್ರೀ ಸಿದ್ಧಲಿಂಗ ಸ್ವಾಮಿಗಳು (೧೮೫೩-೧೯೦೧) ಶ್ರೀ ಉದ್ದಾನ ಶಿವಯೋಗಿಗಳು (೧೯೦೧-೧೯೪೧) ಶ್ರೀ ಮರುಳಾರಾಧ್ಯ ಸ್ವಾಮಿಗಳು (೧೯೨೪-೧೯೩೦). ಈಗ ಕ್ಷೇತ್ರಾಧ್ಯಕ್ಷರಾಗಿರುವ ಶ್ರೀ ಶಿವಕುಮಾರ ಸ್ವಾಮಿಗಳು ವಿರಕ್ತಾಶ್ರಮ ದೀಕ್ಷೆ ಪಡೆದುದ್ದು ೧೯೩೦ ರಲ್ಲಿ.

೧೯೧೭ ರಲ್ಲಿಯೇ ಶ್ರೀ ಉದ್ದಾನ ಸ್ವಾಮಿಗಳು ಇಲ್ಲಿ ಸಂಸ್ಕೃತ ಪಾಠಶಾಲೆ ಪ್ರಾರಂಭಿಸಿದ್ದರು; (ಇದು ಸಂಸ್ಕೃತ ಕಾಲೇಜಾಗಿ ಪರಿವರ್ತಿತವಾಯಿತು); ಸಾರ್ವಜನಿಕ ವಿದ್ಯಾರ್ಥಿನಿಲಯು ಆರಂಭಿಸಿದ್ದರು. ಅದಕ್ಕೆ ಮುನ್ನ ೧೯೧೦ ರಲ್ಲಿ ಪ್ರತಿ ವರ್ಷವೂ ಇಲ್ಲಿ ಶಿವರಾತ್ರಿಯ ಸಮಯಕ್ಕೆ ಹತ್ತು ದಿನ ಜಾತ್ರೆ ನಡೆಯಬೇಕೆಂದು ಸಂಕಲ್ಪಿಸಿ ಅದನ್ನೂ ಮೊದಲು ಮಾಡಿದ್ದರು. ಇವುಗಳನ್ನೂ ಜೊತೆಗೆ ಇನ್ನೂ ಹಲವಾರು ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕ ಚಟುವಟಿಕೆಗಳನ್ನೂ ಶ್ರೀ ಶಿವಕುಮಾರ ಸ್ವಾಮಿಗಳು ಕೈಕೊಂಡು ನಡೆಸುತ್ತಿರುವುದು ಎಲ್ಲರೂ ಬಲ್ಲ ಸಂಗತಿ. .

ಶಿವರಾತ್ರಿಯ ಸಮಯದಲ್ಲಿ ಇಲ್ಲಿ ನಡೆಯುವ ಜಾತ್ರೆ ನವರಾತ್ರಿಯಂಥ ಒಂದು ದೊಡ್ಡ ಹಬ್ಬ; ಆಗ ಸೇರುವ ಯಾತ್ರಿಕರ ಸಂಖ್ಯೆ ಒಂದು ಒಂದೂವರೆ ಲಕ್ಷ; ಶ್ರೀ ಮಠದಿಂದ ಎಲ್ಲರಿಗೂ ದಿನಕ್ಕೆ ಎರಡೂ ಹೊತ್ತು ಉಚಿತ ಊಟ ಸ್ವತಃ ಸ್ವಾಮಿಗಳರ ಮೇಲ್ವಿಚಾರಣೆಯಲ್ಲಿ. ಆಗ ಅವರು ಊಟಕ್ಕೆ ಕುಳಿತ ಸಾವಿರಾರು ಜನರ ನಡುವೆ ಓಡಾಡುತ್ತಾ, ಯಾರಿಗೆ ಬಂತು ಯಾರಿಗೆ ಬರಲಿಲ್ಲ ಎಂದು ನೋಡಿಕೊಳ್ಳುವ ಶ್ರದ್ಧೆಗೆ ದಣಿವಿಲ್ಲ; ಸಾಟಿಯಿಲ್ಲ. (ಜಾತ್ರೆಯ ಸಮಯದಲ್ಲಂತೂ ಇರಲಿ ನಿತ್ಯವೂ ಈ ಕ್ಷೇತ್ರದಲ್ಲಿ ನಡೆಯುವ ಅನ್ನದಾನದಲ್ಲೂ ಅವರದು ಇದೇ ಉಸ್ತುವಾರಿ, ಅಕ್ಕರೆ, ಅಚ್ಚುಕಟ್ಟು.

ತಮ್ಮದು ವಿರಕ್ತಪೀಠವೆಂದು ಮೂಗು ಹಿಡಿದು ಕುಳಿತುಕೊಳ್ಳುವ ಜಾಯಮಾನವಲ್ಲ ಸ್ವಾಮಿಗಳವರದು. ಅವರು ಲೌಕಿಕಜ್ಞರು, ಸ್ವತಃ ಕಾಲೇಜು ವಿದ್ಯಾಭ್ಯಾಸ ಮಾಡಿದವರು; ಇವೊತ್ತಿನ ಪ್ರಪಂಚದ ಆಗುಹೋಗುಗಳನ್ನು ಬಲ್ಲವರು; ಆಧುನಿಕ ಶಿಕ್ಷಣದ ಅವಶ್ಯಕತೆ ಅರಿತವರು. ಜೊತೆಗೆ ಸಮಾಜೋದ್ಧಾರವೇ ಧರ್ಮ ಪೀಠಾಧಿಪತಿಗಳ ಕಾರ್ಯವೆಂಬುದನ್ನು ತಿಳಿದು ಅದನ್ನು ಹತ್ತು ಒಗೆಯಲ್ಲಿ ಮಾಡಿ ತೋರಿಸುತ್ತಿರುವವರು. ಅವರದು ಸನಾತನ ನೂತನ ಪಾಂಡಿತ್ಯಗಳಿಂದ ಕೂಡಿದ ಪ್ರಗತಿಪರ ದೃಷ್ಟಿ.



ಅಂತೆಯೆ ಇಲ್ಲಿರುವ ಉಚಿತ ವಿದ್ಯಾರ್ಥಿ ನಿಲಯದಲ್ಲಿ ಜಾತಿಮತಗಳ ಸಂಕುಚಿತ ಭಾವವಿಲ್ಲ. ಇದು ಎಲ್ಲ ವರ್ಗಗಳಿಗೂ ಸೇರಿದ ೩೬೦೦ ವಿದ್ಯಾರ್ಥಿಗಳ ಒಂದು ದೊಡ್ಡ ಗುರುಕುಲ; ರಾಷ್ಟ್ರದ ಅಖಂಡತೆಯ ದ್ಯೋತಕ. ಇದಲ್ಲದೆ ಈ ಕ್ಷೇತ್ರದಲ್ಲಿಯೂ ಬೇರೆ ಕಡೆಗಳಲ್ಲಿಯೂ ಶ್ರೀಮಠ ನಡೆಸುತ್ತಿರುವ ಪ್ರಾಥಮಿಕ ಶಾಲೆ, ಮಾಧ್ಯಮಿಕ ಶಾಲೆ, ಪ್ರೌಢಶಾಲೆ, ವೃತ್ತಿಶಿಕ್ಷಣಶಾಲೆ, ಉಪಾಧ್ಯಾಯರ ತರಬೇತಿಶಾಲೆ, ಕಾಲೇಜುಗಳು, ವಿದ್ಯಾರ್ಥಿ ನಿಲಯಗಳು ಮಠದ ವ್ಯಾಪಕವಾದ ಚಟುವಟಿಕೆಗೆ ನಿದರ್ಶನ. ಇದು ಸ್ವಾಮಿಗಳವರು ನಾಲ್ಕು ದಶಕಗಳಿಂದ ಕೈಕೊಂಡು ನಡೆಸುತ್ತಿರುವ ಸಮಾಜೋದ್ಧಾರ ಕಾರ್ಯದ ಒಂದು ಮುಖ.

ಇನ್ನು ಪಠ್ಯೇತರ ಚಟುವಟಿಕೆಗಳು. ೧೯೩೮ ರಲ್ಲಿ ಏರ್ಪಟ್ಟ ತೋಂಟದಾರ್ಯ ವಿದ್ಯಾವರ್ಧಿನೀ ಸಭೆ ಲೇಖನ ಭಾಷಣ ಸ್ಪರ್ಧೆಗಳನ್ನು ನಡೆಸುತ್ತ ವಿದ್ಯಾರ್ಥಿಗಳಲ್ಲಿ ಅಭಿರುಚಿ ಬೆಳೆಸುತ್ತಿದೆ; ಶ್ರೀ ಸಿದ್ಧಲಿಂಗೇಶ್ವರ ನಾಟಕ ಸಭೆ ವಿದ್ಯಾರ್ಥಿಗಳಲ್ಲಿ ಅಡಗಿರುವ ಕಲಾಪ್ರಜ್ಞೆಗೆ ಪುಟಕೊಡುತ್ತಿದೆ; ಶ್ರೀ ಸಿದ್ಧಲಿಂಗೇಶ್ವರ ಪ್ರಕಾಶನ ಆಧ್ಯಾತ್ಮಿಕ, ಶೈಕ್ಷಣಿಕ, ಸಾಮಾಜಿಕ ವಸ್ತುಗಳನ್ನುಳ್ಳ ಪುಸ್ತಕಗಳನ್ನು ಪ್ರಕಟಿಸುತ್ತಿದೆ; ೧೯೬೪ ರಲ್ಲಿ ಸ್ಥಾಪನೆಯಾದ ಹಳೆಯ ವಿದ್ಯಾರ್ಥಿ ಸಂಘ 'ಸಿದ್ಧಗಂಗಾ' ಮಾಸಿಕ ಪತ್ರಿಕೆಯು, ಜಾತ್ರೆಯಲ್ಲಿ ವಸ್ತುಪ್ರದರ್ಶನ ಏರ್ಪಡಿಸುವ ಹೊಣೆ ಹೊತ್ತಿದೆ.

ಕಾಯಕಕ್ಕೆ ಇಲ್ಲಿ ಎಲ್ಲ ದೃಷ್ಟಿಗಳಿಂದಲೂ ಬೆಲೆ. ಸ್ವತಃ ಸ್ವಾಮಿಗಳವರೇ ಅದನ್ನು ಮಾಡಿ ತೋರಿಸುತ್ತಿರುವಾಗ ಉಳಿದವರದೇನು? ಕ್ಷೇತ್ರದ ಪ್ರತಿ ವಿದ್ಯಾರ್ಥಿಗೂ ಶ್ರಮದಾನವುಂಟು. ಗಿಡಗಳಿಗೆ ನೀರು ಹಾಕುವುದು, ಕಟ್ಟಡಗಳಿಗೆ ಕಲ್ಲು ಮಣ್ಣು ಸಾಗಿಸುವುದು, ಸುಗ್ಗಿಯಲ್ಲಿ ಬೆಳೆ ಕೊಯ್ದು ಒಕ್ಕಣೆ ಮಾಡುವುದು, ಗುಡಿಸುವುದು, ಬಡಿಸುವುದು, ಸ್ವಾಮಿಗಳವರೂ ಉಪಾಧ್ಯಾಯರುಗಳೂ ಈ ಕೆಲಸದಲ್ಲಿ ಒಂದಾಗಿ ಸೇರುತ್ತಾರೆ ಇದರಲ್ಲಿ ಮೇಲಿಲ್ಲ, ಕೀಳಿಲ್ಲ; ನಾ ಮಾಡಿದೆ, ತಾ ಮಾಡಿದೆನೆಂಬುದಿಲ್ಲ.

ಇಷ್ಟೆಲ್ಲ ಶೈಕ್ಷಣಿಕ ಚಟುವಟಿಕೆಗಳಿಗೆ, ಸಮಾಜೋದ್ಧಾರ ಕಾರ್ಯಕ್ಕೆ, ದೀನ ದಲಿತರ ಸೇವೆಗೆ ಹಣ ಎಲ್ಲಿಂದ ಬರಬೇಕು? ಇರುವ ಜಮೀನಿನಿಂದ ಬರುವ ಉತ್ಪತ್ತಿ ಒಂದೆರಡು ತಿಂಗಳಿಗೆ ಸಾಕಾದೀತೇನೊ. ಉಳಿದದ್ದಕ್ಕೆ ಮಹಾಜನರ ಕೊಡುಕೆ, ರಾಜ್ಯ-ಕೇಂದ್ರ ಸರಕಾರಗಳ ಸಹಾಯ ಸಹಕಾರಗಳೇ ಆಧಾರ. ಇದನ್ನೆಲ್ಲ ಆಗ ಮಾಡಿಸುತ್ತಿರುವುದು, ಹತ್ತೂ ಕಡೆ ಕಣ್ಣಾಗಿ ನೋಡಿಕೊಳ್ಳುತ್ತಿರುವುದು ಸ್ವಾಮಿಗಳ ಆಶ್ಚರ್ಯಕರ ಶಕ್ತಿ.

ಇಂಥ ಕಾಯಕದ್ದು ನಿಂತ ಕಡೆ ನಿಲ್ಲುವ ಚೇತನವಲ್ಲ. ಇನ್ನು ಜಾತ್ರೆಯ

ಸಮಯವೆಂದರೆ ಕೇಳಬೇಕೆ? ಶಿವರಾತ್ರಿಯನ್ನು ಮುಂದಿಟ್ಟುಕೊಂಡು ಸಂದರ್ಶನಕ್ಕೆ ಹೋಗಿದ್ದ ನಾವು ಕಾಯಬೇಕಾಗಿ ಬಂದದ್ದು ಸಹಜವೇ. ಬೆಂಗಳೂರಿನಿಂದ ಬೆಳಗ್ಗೆ ಏಳೂವರೆಗೆ ರೈಲಿನಲ್ಲಿ ಹೊರಟು ೭೧ ಮೈಲಿ ದೂರದ ಸಿದ್ಧಗಂಗೆಯನ್ನು ತಲುಪಿದಾಗ ೧೦ ಗಂಟೆ. ಕ್ಷೇತ್ರದ ಹೆದ್ದಾರಿ ಪ್ರವೇಶಿಸುತ್ತಲೇ ಎದುರಿಗೆ ಸ್ವಾಮಿಗಳ ಕಾರು. ಇದೇನು, ಸ್ವಾಮಿಗಳು ಎಲ್ಲಿಗೋ ಹೋಗುತ್ತಿರುವ ಹಾಗಿದೆಯಲ್ಲಾ. ಇಷ್ಟು ದೂರ ಬಂದು ದರ್ಶನ ಲಭಿಸದೆ ಹೋದೀತೋ ಎಂದು ಕಳವಳ. ಆದರೆ ಅದಕ್ಕೆ ಕಾರಣ ವಿರಲಿಲ್ಲ. ನಮ್ಮನ್ನು ಆ ಗಳಿಗೆಯಲ್ಲೇ ಕಂಡ ಸ್ವಾಮಿಗಳವರು ಕಾರು ನಿಲ್ಲಿಸಿ, ಕುಶಲ ಪ್ರಶ್ನೆ ಮಾಡಿದರು; ತುಮಕೂರಿಗೆ ಹೋಗಿ ಮಧ್ಯಾಹ್ನ ೧ಕ್ಕೆ ಬರುವುದಾಗಿ ಹೇಳಿದರು; ಅಲ್ಲಿಯವರೆಗೂ ನೋಡುವುದನ್ನೆಲ್ಲ ನೋಡಿ ವಿಶ್ರಾಂತಿ ಗೃಹದಲ್ಲಿ ಇರಬಹುದೆಂದು ನುಡಿದರು.

ಸಿದ್ಧಗಂಗೆಯ ತಪೋವನಸದೃಶವಾದ ಪರಿಸರವೇ ಒಂದು ಸೊಗಸು. ಬೆಟ್ಟದ ಮಡಿಲಲ್ಲಿ ಕುಳಿತಿರುವ ಸಿದ್ಧಲಿಂಗೇಶ್ವರ ಸ್ವಾಮಿಯ, ಗಂಗಾ ಮಾತೆಯ ಗುಡಿಗಳನ್ನು ಸಂದರ್ಶಿಸಿ, ಮೇಲಿನಿಂದ ಹತ್ತಾರು ಮೈಲಿಯವರೆಗೆ ಕಾಣುವ ಹಕ್ಕಿನೋಟದಿಂದ ಹರ್ಷಗೊಂಡು ಕೆಳಗಿಳಿದರೆ ಶ್ರೀಮಠದ, ಅದರ ನಾನಾ ಭಾಗಗಳ ಪರಿಚಯ. ಅಷ್ಟು ಹೊತ್ತಿಗೆ ಹನ್ನೆರಡು ಘಂಟೆ ಬಿಡಾರಕ್ಕೆ ಹಿಂದಿರುಗಿ ಹೊಟ್ಟೆಯ ಯೋಚನೆ ಬರುವ ಹೊತ್ತಿಗೆ ಸ್ವಾಮಿಗಳು ಬೆಳಗ್ಗೆ ಮಾಡಿದ್ದ ಪೂಜೆಯ ಪ್ರಸಾದದ ಹಣ್ಣುಗಳು; ಆಮೇಲೆ ಆರೋಗಣೆ, ಸ್ವಲ್ಪ ವಿಶ್ರಾಂತಿ ಪಡೆದು ಏಳುವ ಹೊತ್ತಿಗೆ ಸ್ವಾಮಿಗಳ ಕಾರಿನ ಹಾರನ್ನಿನ ಸದ್ದು ಗಡಿಯಾರ ನೋಡಿದರೆ ಸರಿಯಾಗಿ ಒಂದು ಘಂಟೆ!

ಸ್ವಾಮಿಗಳವರನ್ನು ಕಾಣಲು ಅವರ ಕೊಠಡಿಗೆ ಹೋದರೆ ಅವರೆಲ್ಲಿ? ಮಠದ ಮುಂದೆ ಊಟಕ್ಕೆ ಕುಳಿತಿದ್ದ ಬಡಬಗ್ಗರ ನಡುವೆ ಓಡಾಡುತ್ತಿದ್ದಾರೆ; ಅನ್ನದಾನದ ಉಸ್ತುವಾರಿ ನೋಡುತ್ತಿದ್ದಾರೆ, ಆ ಉರಿಬಿಸಿಲನ್ನೂ ಲೆಕ್ಕಿಸದೆ! ಹೀಗೆ ಎಷ್ಟು ಹೊತ್ತು ಓಡಾಡುತ್ತಿದ್ದರೋ ಬೇರಾವುದನ್ನೂ ಮನಸ್ಸಿಗೆ ಹಚ್ಚಿಕೊಳ್ಳದೆ. ಕೊನೆಗೆ ನಮ್ಮನ್ನು ಕಂಡು ಕೊಠಡಿಗೆ ಬಂದಾಗ ಮಧ್ಯಾಹ್ನ ಎರಡು ಘಂಟೆ.

"ನಿಮ್ಮನ್ನು ಕಾಯಿಸಿದೆ; ಜಾತ್ರೆಯ ಸಮಯ; ಬಿಡುವಿಲ್ಲ; ಐದು ನಿಮಿಷ ಅವಕಾಶವುಂಟು" ಎಂದರು, ನಮ್ಮ ಪ್ರಣಾಮಗಳನ್ನು ಸ್ವೀಕರಿಸುತ್ತ.

ಆದರೆ ನಾವು ಕೇಳಿದ್ದು ಅದಕ್ಕೆ ಮೂರರಷ್ಟು. ಮಾತಿನಲ್ಲಿ ನಿಜವಾಗಿ ಕಳೆದದ್ದು ಮುಕ್ಕಾಲು ಘಂಟೆ!

ಅವರು ಹುಟ್ಟಿದ್ದು ೧೯೦೮ ರಲ್ಲಿ; ಬೆಂಗಳೂರು ಜಿಲ್ಲೆಯ ಮಾಗಡಿ ತಾಲ್ಲೂಕಿನ



ವೀರಾಪುರದಲ್ಲಿ ಆಗಿನ ಹೆಸರು ಶಿವಣ್ಣ, ಓದಿದ್ದು ಬಿ.ಎ. ತನಕ; ಸೆಂಟ್ರಲ್ ಕಾಲೇಜಿನಲ್ಲಿ. ಮುಂದೆ ಸಂನ್ಯಾಸದ ಕರೆ ಬಂದಾಗ ಅದನ್ನು ಸ್ವೀಕರಿಸಿ, ಲೋಕೋದ್ಧಾರಕ್ಕೆ ಬದುಕನ್ನು ಮುಡಿಪು ಮಾಡಿಕೊಂಡದ್ದು ೧೯೩೦ ರಲ್ಲಿ. ಅಂದಿನಿಂದ ಇಂದಿನವರೆಗೆ ಅದೊಂದು ಪವಿತ್ರ ಯಜ್ಞ.

ಸಂಭಾಷಣೆಯಲ್ಲಿ ಸಹಜವಾಗಿಯೆ ಸದ್ಯದ ಸಮಸ್ಯೆಗಳೆಲ್ಲ ಬಂದವು. ಸ್ವಾಮಿಗಳವರು ಚಿಂತನಶೀಲರು, ನಮ್ಮ ಸಮಾಜದ ರೋಗರುಜಿನ ಶಕ್ತಿ ಶೈಥಿಲ್ಯಗಳನ್ನೆಲ್ಲ ಬಲ್ಲರು. ಅಂತೆಯೇ ಅವಕ್ಕೆ ಮದ್ದನ್ನು ಕೂಡ.

ದೇಶದಲ್ಲಿ ಈಗ ಐಕಮತ್ಯ ಸಾಧನೆಗೆ ಆಗಬೇಕಾದದ್ದರೂ ಏನು?

ಐಕ್ಯಮತ್ಯ ಭಂಗವಾಗುವುದು ಸ್ವಾರ್ಥಪರತೆಯಿಂದ. ಅದು ದೂರವಾದರೆ ಒಕ್ಕಟ್ಟು ತಾನಾಗಿಯೇ ಬರುತ್ತದೆ. ಐಕಮತ್ಯಕ್ಕೆ ಮೂಲಭೂತವಾದದ್ದು ಧರ್ಮದ ಪರಿಜ್ಞಾನ. ಧರ್ಮಜಾಗೃತಿ ಆಗದೆ ಐಕಮತ್ಯದ ಮಾತು ಹಾಸ್ಯಾಸ್ಪದ. ಯಾರು ಮತ್ತೊಬ್ಬರ ಕಷ್ಟವನ್ನು ಕಂಡು ಅದೇ ತನ್ನದೆಂದು ಯೋಚಿಸುವನೋ ಅವನೇ ಧರ್ಮ ಬಲ್ಲವನು. ಅದೇ ನಿಜವಾದ ಧರ್ಮ, ಇದನ್ನು ಮರೆತು ನಾವು ನನ್ನದು ತನ್ನದೆಂದು ತೊಳಲುತ್ತಿದ್ದೇವೆ.

ಜನತೆಯಲ್ಲಿ ರಾಷ್ಟ್ರೀಯ ಪ್ರಜ್ಞೆ ಈಗ ತುಂಬ ಅವಶ್ಯವಲ್ಲವೆ? ಅದನ್ನು ಬೆಳೆಸುವುದು ಹೇಗೆ?

ಚಿಕ್ಕಂದಿನಿಂದಲೇ ಮಕ್ಕಳಿಗೆ ರಾಷ್ಟ್ರಪ್ರೇಮದ ಪಾಠ ಕಲಿಸುತ್ತಿರಬೇಕು; ತಕ್ಕ ತಿಳಿವಳಿಕೆ ಮೂಡಿಸುತ್ತಿರಬೇಕು. ಅದನ್ನು ಕಲಿಸುವ ಅಧ್ಯಾಪಕರೂ ಜನನಾಯಕರೂ ಆದರ್ಶ ರೀತಿಯಲ್ಲಿ ನಡೆದುಕೊಳ್ಳಬೇಕು. ಅವರ ಜೀವನವೇ ಒಂದು ಒಳ್ಳೆಯ ಮೇಲ್ಪಂಕ್ತಿ ಎನ್ನುವಹಾಗಿರಬೇಕು. ಆಗ ಅದು ಪರಿಣಾಮಕಾರಿಯಾದೀತು. ಅದನ್ನು ನೋಡಿ ಬೆಳೆಯುವ ಮಕ್ಕಳು ಸತ್ಪ್ರಜೆಗಳಾದಾರು, ನಿಸ್ಸಿಮ ರಾಷ್ಟ್ರಭಕ್ತರಾದರು.

ಹಿಂದು ಸಂಘಟನೆಯಲ್ಲಿ ಧರ್ಮಗುರುಗಳ ಪಾತ್ರ?

ಅದು ಸಾಮಾನ್ಯವಾದದ್ದಲ್ಲ; ಪ್ರಧಾನವಾದದ್ದು, ಹಿಂದು ಧರ್ಮದ ವಿಶಾಲ ತತ್ವಗಳ ಬಗೆಗೆ ಜನಕ್ಕೆ ಅವರು ತಕ್ಕ ತಿಳಿವಳಿಕೆ ಕೊಡಬೇಕು. ಪ್ರಪಂಚದಲ್ಲಿ ಹಿಂದು ಧರ್ಮದಷ್ಟು ವಿಶಾಲವಾದ ಧರ್ಮ ಇನ್ನೊಂದಿಲ್ಲ. ಹಿಂದುಗಳಿಗೆ ಸ್ವಧರ್ಮದಲ್ಲಿ ನಿಷ್ಠೆ ಹುಟ್ಟುವಂಥ ಕೆಲಸ ಆಗಬೇಕು. ಈ ಧರ್ಮಜಾಗೃತಿ ಮಠಾಧಿಪತಿಗಳ ಕಾರ್ಯ.

ಇನ್ನು ಅಸ್ಪೃಶ್ಯತೆ?

ಇದು ಹಿಂದು ಸಮಾಜಕ್ಕೆ ಅಂಟಿದ ಕಳಂಕ. ನಾವು ಕ್ರಿಸ್ತೀಯರನ್ನು ಗೌರವಿಸುತ್ತೇವೆ; ಮುಸ್ಲಿಮರನ್ನು ಗೌರವಿಸುತ್ತೇವೆ. ಆದರೆ ನಮ್ಮ ಧರ್ಮಾವಲಂಬಿಗಳೇ ಆದ ಹರಿಜನರನ್ನು ನಿರ್ಲಕ್ಷಿಸುತ್ತೇವೆ. ಇದೆಂತ ಚೋದ್ಯ!–ಸ್ವಾಮಿಗಳು ವಿಷಾದದ ನಗೆ ನಕ್ಕರು. ಆಗ ಬಂದಿತು ಮತಾಂತರದ ಪ್ರಶ್ನೆ.

"ಇತರ ಎಲ್ಲ ಧರ್ಮಗಳ ಬಗೆಗೂ ನನಗೆ ಗೌರವವುಂಟು. ಆದರೆ ಕ್ರಿಸ್ತೀಯರೂ ಮುಸ್ಲಿಮರೂ ಹಿಂದುಗಳನ್ನು ಮತಾಂತರಗೊಳಿಸುವುದನ್ನು ಸಹಿಸಲಾರೆ- ನಮ್ಮ ಜನಕ್ಕೆ ಕಾನ್ವೆಂಟುಗಳ ಮೋಹ ತಪ್ಪಿಲ್ಲ. ಅವರು ನಮ್ಮ ಜನರನ್ನು ಹಿಡಿಯುವುದಕ್ಕೆ ಇರುವುದು ಎರಡೇ ಸಾಧನ: ವಿದ್ಯೆ, ಔಷಧಿ. ಇದೇ ಅವರ ಮಂತ್ರ. ಕಾನ್ವೆಂಟ್ ಮಾದರಿಯ ಕೆಲಸ ನಮ್ಮಲ್ಲಿ ನಡೆಯಬೇಕು, ನಮ್ಮ ಹೆಣ್ಣುಮಕ್ಕಳು ಕ್ಲಬ್, ಸಮಾಜ ಎಂದು ಕಟ್ಟಿಕೊಳ್ಳುವುದನ್ನು ಕಂಡಾಗ ಇದು ಅನಾವಶ್ಯಕ. ರಚನಾತ್ಮಕ ಕೆಲಸ ಮಾಡಿ' ಎಂದು ನಾನು ಹೇಳುತ್ತಿರುತ್ತೇನೆ. ನಮ್ಮ ಸಂಸ್ಕೃತಿಯನ್ನು ಉಳಿಸಬೇಕಾದವರು ನಮ್ಮ ಹೆಣ್ಣುಮಕ್ಕಳೇ"—ಎಂದರು.

ಈಗಿನ ಯುವಕರಲ್ಲಿ ಇಷ್ಟೊಂದು ಅಶಾಂತಿ, ಅಶಿಸ್ತು ಕಂಡುಬರುತ್ತಿದೆಯಲ್ಲ. ಅದಕ್ಕೆ ಕಾರಣವೇನು ? ಪರಿಹಾರವೇನು ?

—ಸ್ವಾತಂತ್ರ್ಯಾಂದೋಲನ ಕಾಲದಲ್ಲಿ ಜನ ನಾಯಕರು ವಿದ್ಯಾರ್ಥಿಗಳ, ಯುವಜನರ ನೆರವು ಕೋರಿದರು. ಅದರಲ್ಲಿ ಭಾಗವಹಿಸಿದವರಿಗೆ ಒಂದು ಬಗೆಯ ಅಶಿಸ್ತಿನ ಜೀವನವೇ ಮೈಗಂಟಿತು. ಕಾನೂನನ್ನು ಮುರಿಯುವುದೇ ತಮ್ಮ ಜನ್ಮಸಿದ್ಧ ಹಕ್ಕೆಂಬ ಭಾವನೆ ಬೆಳೆಯಿತು. ಸ್ವಾತಂತ್ರ್ಯ ಬಂದ ಮೇಲೆ ಈ ಭಾವನೆಯನ್ನು ಅಳಿಸಲು ನಮ್ಮ ನಾಯಕರು ಏನೂ ಮಾಡಲಿಲ್ಲ. ಆದ್ದರಿಂದ ಈ ಮನೋಧರ್ಮವೇ ಇವತ್ತಿಗೂ ನಿಂತಿದೆ. ಸ್ವೇಚ್ಛಾಚಾರವೇ ಸ್ವಾತಂತ್ರ್ಯ; ವಿಧೇಯತೆಯೇ ದಾಸ್ಯ ಎನ್ನುವ ಅಭಿಪ್ರಾಯವೇ ಯುವಜನಕ್ಕೆ ಆದರಣೀಯವಾಗಿದೆ. ಇದನ್ನು ನಿವಾರಿಸಬೇಕಾದರೆ ಸಾರ್ವತ್ರಿಕ ಚಳವಳಿ ನಡೆಯಬೇಕು; ವ್ಯಾಪಕವಾದ ತರಬೇತಿ ದೊರೆಯಬೇಕು. ರಾಜಕಾರಣಿಗಳು ಯುವಜನರನ್ನು ತಪ್ಪುದಾರಿಗೆ ಎಳೆಯುವುದು ನಿಲ್ಲಬೇಕು. ಈಗಲೂ ಅವರು ತಮ್ಮ ಸ್ವಾರ್ಥಕ್ಕೆ ಯುವಜನರನ್ನು ಉಪಯೋಗಿಸಿಕೊಳ್ಳುತ್ತಿದ್ದಾರೆ.

ರಾಜಕಾರಣಿಗಳ ಸಂಚುಪ್ರವೇಶ ಈ ಒಂದು ರಂಗದಲ್ಲೇ ಅಲ್ಲ; ಜೀವನದ ಎಲ್ಲಾ ಕ್ಷೇತ್ರಗಳಲ್ಲಿಯೂ ಅವರ ದುಷ್ಪ್ರಭಾವ ಕಾಣುತ್ತಿದೆಯಲ್ಲವೆ ? ಸ್ವಾಮಿಗಳವರಂಥ ಧರ್ಮಪೀಠಾಧಿಪತಿಗಳು ಸಮಾಜದ ಮೇಲೆ ಬೀರುತ್ತಿರುವ ಸಾತ್ವಿಕ ಪ್ರಭಾವವೆಲ್ಲಿ! ರಾಜಕಾರಣಿಗಳ ದುಷ್ಪ್ರಭಾವವೆಲ್ಲಿ ?



—ಅದಕ್ಕೆ ಸ್ವಾಮಿಗಳವರು ಕೊಟ್ಟದ್ದು ನೇರವಾದ ಉತ್ತರ, ಗಾಂಧೀಜಿಯವರ ಮಾತಿನಲ್ಲಿ; 'ಲೌಕಿಕವನ್ನು ತ್ಯಜಿಸಿ, ವಿರಕ್ತಿಯ ಮಾರ್ಗ ಹಿಡಿದಿರುವ ಸ್ವಾರ್ಥರಹಿತರಾದ ಸಾಧುಸಂತರನ್ನು ದೂರವಿಟ್ಟಿರುವುದೇ ಇವೊತ್ತು ರಾಜಕಾರಣ ಕೆಟ್ಟುಹೋಗಿರುವುದಕ್ಕೆ, ಅಶುದ್ಧವಾಗಿರುವುದಕ್ಕೆ ಕಾರಣ. ಆದ್ದರಿಂದಲೇ ಅವರು ರಾಜಕಾರಣದಲ್ಲಿ ಸಕ್ರಿಯ ಪಾತ್ರ ವಹಿಸಿ ಅದನ್ನು ಶುದ್ಧಿಗೊಳಿಸಬೇಕಾದ ಅಗತ್ಯವಿದೆ.'

ಸಮಯವಾಗಿತ್ತು. ಗಡಿಯಾರ ನೋಡಿಕೊಂಡಾಗ ಮುಕ್ಕಾಲು ಘಂಟೆ ಕಳೆದುಹೋಗಿತ್ತು. ನಮ್ಮ ಧನ್ಯವಾದ ಸ್ವೀಕರಿಸುತ್ತಾ ಸಿಧಾನವಾಗಿ ಇನ್ನೊಮ್ಮೆ ಬನ್ನಿ" ಎಂದು ನಗುಮೊಗದಿಂದ ನುಡಿದು ಸ್ವಾಮಿಗಳವರು ಎದ್ದರು. ಅವರ ಸೂಚನೆಯ ಮೇಲೆ ಬಂದ ತಣ್ಣನೆಯ ಎಳನೀರನ್ನು ಹೊಟ್ಟೆತುಂಬ ಕುಡಿದು ಏಳುವ ಹೊತ್ತಿಗೆ ಅವರು ಅಲ್ಲಿಂದ ಕಣ್ಮರೆಯಾಗಿದ್ದರು. ಅವರಿಗಾಗಿ ಕಾಯುತ್ತ ನಿಂತಿದ್ದ ಹತ್ತಾರು ಅವಸರದ ಕೆಲಸಗಳಲ್ಲಿ ಯಾವುದು ಅವರನ್ನು ಕೈಬೀಸಿ ಕರೆದಿತ್ತೊ.

---

## ಎಲ್ಲವನ್ನು ನುಂಗುವದಾವದು !

ಜರಾ ರೂಪಂ ಹರತಿ, ಧೈರ್ಯಮಾಶಾ
ಮೃತ್ಯುಃ ಪ್ರಾಣಾನ್, ಧರ್ಮಚರ್ಯಾಮಸೂಯಾ
ಕ್ರೋಧಃ ಶ್ರಿಯಂ ಶೀಲಮನಾರ್ಯ ಸೇವಾ
ಹ್ರಿಯಂ ಕಾಮಃ ಸರ್ವ ಮೇವಾಭಿಮಾನಃ

ಮುದಿತನವು ಸೌಂದರ್ಯವನ್ನು ಅಪಹರಿಸಿಬಿಡುತ್ತದೆ, ಆಶೆಯು ಧೈರ್ಯವನ್ನು, ಸಾವು ಜೀವನವನ್ನು, ಅಸೂಯೆಯು ಧರ್ಮಾಚರಣೆಯನ್ನು, ಸಿಟ್ಟು ಐಶ್ವರ್ಯವನ್ನು, ನೀಚಜನರ ಸೇವೆಯು ಶೀಲವನ್ನು ಅಪಹರಿಸುತ್ತವೆ. ಅದರಂತೆ ಕಾಮವು ನಾಚಿಕೆಯನ್ನು ಅಳಿದು ಮನುಷ್ಯನು ನಿರ್ಲಜ್ಜನಾಗಿ, ವ್ಯವಹರಿಸುವಂತೆ ಮಾಡುತ್ತದೆ, ದುರಭಿಮಾನವು ಎಲ್ಲವನ್ನು ನುಂಗಿ ನೀರು ಕುಡಿಯುತ್ತದೆ.

ಮಹಾಭಾರತ
—ಸಂಗ್ರಹ : ಕಾಂತಾಚಾರ್ಯ ಜೋಶಿ

# ಜಗದ್ದರ್ಶನ ಮಾಲೆ—೩
## ಅದ್ವೈತ ದರ್ಶನ

—ವಿದ್ವಾನ್. ಎನ್. ರಂಗನಾಥ ಶರ್ಮಾ.

ವೇದಾಂತ ದರ್ಶನಗಳಲ್ಲಿ ಅದ್ವೈತ ದರ್ಶನವು ಅತ್ಯಂತ ಪ್ರಾಚೀನವೆಂದು ಹೇಳಬಹುದಾಗಿದೆ. ನ್ಯಾಯ, ವೈಶೇಷಿಕ, ಸಾಂಖ್ಯ, ಮೀಮಾಂಸಾದರ್ಶನಗಳ ಪ್ರಾಚೀನ ಗ್ರಂಥಗಳಲ್ಲಿ ತಮಗೆ ಪ್ರತಿಕಕ್ಷಿಗಳಾದ ವೇದಾಂತಿಗಳ ಸಿದ್ಧಾಂತವನ್ನು ಅನುವೋದಿಸಿರುವುದುಂಟು. ಆ ಗ್ರಂಥಗಳಲ್ಲಿ ವೇದಾಂತವೆಂದರೆ ಅದ್ವೈತದರ್ಶನವೆಂದೇ ತಿಳಿದುಅನುವಾದಿಸಿರುವುದರಿಂದ ಅದ್ವೈತವು ಅತ್ಯಂತ ಪ್ರಾಚೀನವೆನ್ನುವುದಕ್ಕೆ ಪುಷ್ಟಿದೊರೆಯುತ್ತವೆ. ಅವೈದಿಕ ದರ್ಶನಗಳೆನಿಸಿದ ಪುರಾತನ ಬೌದ್ಧಜೈನ ಗ್ರಂಥಗಳಲ್ಲಿಯೂ ಸಹ ವೇದಾಂತವೆಂಬ ಹೆಸರಿನಿಂದ ಅದ್ವೈತ ದರ್ಶನವನ್ನೇ ಪರಾಮರ್ಶಿಸಿರುವುದರಿಂದ ಈ ಅಭಿಪ್ರಾಯ ದೃಢವಾಗುತ್ತದೆ. ಅಲ್ಲದೆ ಉಪಲಬ್ಧ ವೇದಾಂತ ಭಾಷ್ಯಗಳಲ್ಲಿ ಶ್ರೀ ಶಂಕರಾಚಾರ್ಯರು ಭಾಷ್ಯವೇ ಅತಿ ಪ್ರಾಚೀನವೆಂಬುದು ಸರ್ವಸಮ್ಮತ. ಶ್ರೀ ಶಂಕರಚಾರ್ಯರು ತಮ್ಮ ಪ್ರಸ್ಥಾನತ್ರಯ ಭಾಷ್ಯಗಳಲ್ಲಿ ಅದ್ವೈತವನ್ನು ವೇದಾಂತ ಸಿದ್ಧಾಂತವೆಂದೂ ಔಪನಿಷದ ಸಿದ್ಧಾಂತವೆಂದೂ ಹೇಳಿ, ಉಳಿದ ಸಾಂಖ್ಯಾದಿದರ್ಶನಗಳನ್ನು ವಿಸ್ತಾರವಾಗಿ ನಿರಾಕರಿಸಿದ್ದಾರೆ. ವೇದಾಂತ ದರ್ಶನದಲ್ಲಿ ದ್ವೈತಾದಿ ಭೇದಗಳಿದ್ದುವೆಂದು ಅವರ ಯಾವ ಗ್ರಂಥದಲ್ಲಿಯೂ ಸುಳಿವು ದೊರೆಯುವುದಿಲ್ಲ. ಅದ್ವೈತದಲ್ಲಿಯೇ ಜ್ಞಾನಕರ್ಮ ಸಮುಚ್ಚಯವಾದ ಮುಂತಾದ ಅವಾಂತರ ಭೇದಗಳಿದ್ದುವು, ದ್ವೈತವೇದಾಂತದ ನಾಮಮಾತ್ರ ನಿರ್ದೇಶವೂ ಶಂಕರ ಭಾಷ್ಯದಲ್ಲಿ ದೊರೆಯುವುದಿಲ್ಲ.

ಶ್ರೀ ಶಂಕರಾಚಾರ್ಯರ ಕಾಲ ಕ್ರಿ. ಶ. ೮ ನೆಯ ಶತಮಾನವೆಂದು ಬಹುಮಂದಿ ಐತಿಹಾಸಿಕರ ಮಾತು. ಆಚಾರ್ಯರು ಅದ್ವೈತ ಸಿದ್ಧಾಂತದ ಸ್ಥಾಪಕರೆಂಬ ಹೇಳಿಕೆ ಸಾಧುವಲ್ಲ. ಇವರ ಪರಮ ಗುರುಗಳಾದ ಗೌಡಪಾದಾಚಾರ್ಯರ ಮಾಡೂಕ್ಯ ಕಾರಿಕೆಗಳಲ್ಲಿಯೇ ಅದ್ವೈತ ದರ್ಶನವು ವ್ಯವಸ್ಥಿತವಾಗಿರುವುದನ್ನು ಕಾಣಬಹುದು. "ಸಂಪ್ರದಾವಿದ ಆಹುಃ" ಎಂದು ಅಲ್ಲಲ್ಲಿ ಉಲ್ಲೇಖಿಸುವ ಶ್ರೀ ಶಂಕರಾಚಾರ್ಯರ ನುಡಿಗಳಿಂದ ಅದ್ವೈತವು ಸಿದ್ಧಾಂತಗುರು ಶಿಷ್ಯ ಪರಂಪರೆಯ ಮೂಲಕ ದೀರ್ಘ ಕಾಲದಿಂದಲೇ ರೂಢಿಯಲ್ಲಿತೆಂದು ಹೇಳಬಹುದು. ಆದರೆ ಬೌದ್ಧಸಾಂಖ್ಯಾದಿ ದರ್ಶನಗಳನ್ನು ವಿಸ್ತಾರವಾಗಿ ಖಂಡಿಸಿ ಈ ಸಿದ್ಧಾಂತಕ್ಕೆ ಒಂದು ವ್ಯವಸ್ಥಿತವಾದ ರೂಪವನ್ನಿತ್ತು ಪುನಃ ಪ್ರತಿಷ್ಠೆ ಮಾಡಿದವರು ಆಚಾರ್ಯರೇ ಎನ್ನುವುದರಲ್ಲಿ ಯಾವ



ಸಂದೇಹವೂ ಇಲ್ಲ.

ಆಚಾರ್ಯರು ತಮ್ಮ ಬ್ರಹ್ಮಸೂತ್ರ ಭಾಷ್ಯ, ಉಪನಿಷತ್ ಭಾಷ್ಯ, ಗೀತಾ ಭಾಷ್ಯಗಳಲ್ಲಿಯೂ ವಿವೇಕ ಚೂಡಾಮಣಿ ಉಪದೇಶಾಸಾಹಸ್ರಿ ಮುಂತಾದ ಪ್ರಕರಣ ಗ್ರಂಥಗಳಲ್ಲಿಯೂ ಈ ಸಿದ್ಧಾಂತವನ್ನು ಸ್ಫುಟವಾಗಿ ಪ್ರತಿಪಾದಿಸಿದ್ದಾರೆ. ಪದ್ಮಪಾದರ ಪಂಚಪಾದಿಕಾ, ಸುರೇಶ್ವರಾಚಾರ್ಯರ ನೈಷ್ಕರ್ಮಸಿದ್ಧಿ, ಅಮಲಾನಂದರ ವೇದಾಂತ ಕಲ್ಪತರು, ಅಪ್ಪಯ್ಯದೀಕ್ಷಿತರ ಕಲ್ಪತರು ಪರಿಮಳ, ವಾಚಸ್ಪತಿಮಿಶ್ರರ ಭಾಮತೀ, ಪ್ರಕಾಶಾತ್ಮರ ಸಂಕ್ಷೇಪ ಶಾರೀರಿಕ, ವಿದ್ಯಾರಣ್ಯರ ಪಂಚದಶಿ, ಮಧುಸೂದನ ಸರಸ್ವತಿಗಳ ಅದ್ವೈತ ಸಿದ್ಧಿ, ಶ್ರೀಹರ್ಷನ ಖಂಡನಖಂಡಖಾದ್ಯ ಇತ್ಯಾದಿಯಾಗಿ ಸಾವಿರಾರು ಗ್ರಂಥಗಳು ಅದ್ವೈತ ದರ್ಶನಕ್ಕೆ ಅಮೂಲ್ಯವಾಗಿ ಕಾಣಿಕೆಯನ್ನು ಸಲ್ಲಿಸಿವೆ.

ದರ್ಶನಗಳನ್ನು ಎರಡು ಗುಂಪಾಗಿ ವಿಂಗಡಿಸಬಹುದು. ಆತ್ಮವಿದೆ ಎನ್ನುವ ಅತ್ಮಾಸ್ತಿತ್ವವಾದ ಒಂದು, ಆತ್ಮವಿಲ್ಲವೆನ್ನುವ ಆತ್ಮನಾಸ್ತಿತ್ವವಾದ ಇನ್ನೊಂದು. ಚಾರ್ವಾಕರೂ ಬೌದ್ಧರೂ ಆತ್ಮನಾಸ್ತಿತ್ವವಾದಿಗಳು. ಜೈನ ಸಾಂಖ್ಯಾದಿಗಳು ಆತ್ಮಾಸ್ತಿತ್ವವಾದಿಗಳು. ಈ ಅಸ್ತಿತ್ವವಾದಿಗಳಲ್ಲಿ ಅದ್ವೈತಗಳನ್ನು ಬಿಟ್ಟು ಉಳಿದವರೆಲ್ಲ ಜೀವಾತ್ಮರು ಅನಂತ ಸಂಖ್ಯೆಯಲ್ಲಿದ್ದಾರೆಂದೂ ಆತ್ಮಾತಿರಿಕ್ತವಾಗಿ ಜಗತ್ತು ಇದೆಯೆಂದೂ ಹೇಳುತ್ತಾರೆ. ಅದ್ವೈತಿಗಳು ಮಾತ್ರ ಆತ್ಮವು ಅದ್ವಿತೀಯವಾಗಿ ಒಂದೇ ಇದೆಯೆಂದೂ—

'ಬ್ರಹ್ಮ ಸತ್ಯಂ ಜಗನ್ಮಿಥ್ಯಾ ಜೀವೋ ಬ್ರಹ್ಮೈವ ನಾಪರಃ'

'ಬ್ರಹ್ಮ ಒಂದೇ ಸತ್ಯವಾದುದು. ಜಗತ್ತೆಂಬುದು ಮಿಥ್ಯಾ-ಸುಳ್ಳು, ಜೀವನು ಬ್ರಹ್ಮವೇ ಹೊರತು ಬೇರೆಯಲ್ಲ' ಎಂಬುದು ಅದ್ವೈತದರ್ಶನದ ಸಾರ. ಆದರೆ ನಮ್ಮ ಪ್ರತಿದಿನದ ವ್ಯವಹಾರದಲ್ಲಿ ನಾನಾಪದಾರ್ಥಗಳಿಂದ ಕೂಡಿದ ಜಗತ್ತೂ, ಅನಂತ ಜೀವಗಳೂ ಗೋಚರಿಸುತ್ತಿವೆ. ದ್ವೈತವು ಸ್ಪಷ್ಟವಾಗಿದೆ. ದ್ವೈತವಿಲ್ಲದೆ ವ್ಯವಹಾರವೇ ನಡೆಯುವುದಿಲ್ಲ. ಹೀಗೆ ಅತ್ಯಂತಸ್ಫುಟವಾಗಿ ಭೇದವು ಕಾಣುತ್ತಿರುವಾಗ ಆತ್ಮ ಒಂದೇ ಎನ್ನುವುದೂ ಜಗತ್ತು ಮಿಥ್ಯೆ ಎನ್ನುವುದೂ ಹೇಗೆಂಬ ಪ್ರಶ್ನೆ ಸಹಜವಾಗಿ ಹುಟ್ಟಿಕೊಳ್ಳುತ್ತದೆ. ಇದೀಗ ವಿಚಾರ ಮಾಡಬೇಕಾದ ವಿಷಯ. ಲೋಕದಲ್ಲಿ ಮಂದ, ಮಧ್ಯಮ, ಉತ್ತಮ-ಎಂದು ಮೂರು ಬಗೆಯ ಅಧಿಕಾರಿಗಳಿರುತ್ತಾರೆ. ಅಧಿಕಾರಾನುಗುಣವಾಗಿ ಅವರಿಗೆ ಆಯಾ ಶಾಸ್ತ್ರದಲ್ಲಿ ಪ್ರವೇಶವುಂಟು. ಲೌಕಿಕಶಾಸ್ತ್ರಗಳಲ್ಲಿಯೇ ಈ ವ್ಯವಸ್ಥೆ ಇರುವಾಗ ಅಧ್ಯಾತ್ಮಶಾಸ್ತ್ರದಲ್ಲಿ ಇದು ಮುಖ್ಯವಾಗಿರುತ್ತದೆ. ಈ ಅಧಿಕಾರ ಭೇದದಿಂದ ವ್ಯವಹಾರಮಾರ್ಗ, ವಿಚಾರಮಾರ್ಗ, ವಿಜ್ಞಾನಮಾರ್ಗ-ಎಂದು ಮಾರ್ಗಗಳನ್ನು ಸ್ಥೂಲವಾಗಿ ವಿಂಗಡಿಸಬಹುದು.

**೧ ವ್ಯವಹಾರ ಮಾರ್ಗ:** ನಮ್ಮ ಜಾಗ್ರದವಸ್ಥೆಯೇ ವ್ಯವಹಾರದಲ್ಲಿ ಗಣ್ಯವಾಗಿದೆ. ಇದರಲ್ಲಿ ಪದಾರ್ಥಗಳೆಲ್ಲವೂ ವ್ಯಾವಹಾರಿಕವಾಗಿ ಸತ್ಯವೆಂದೇ ಪರಿಗಣಿಸಲ್ಪಡುತ್ತವೆ. ಧರ್ಮಶಾಸ್ತ್ರಾದಿಗಳೆಲ್ಲವೂ ವ್ಯವಹಾರದಲ್ಲಿರುವ ಮಂದಾಧಿಕಾರಿಗಳಿಗಾಗಿ 'ಅವಿದ್ವದ್ವಿಷಯಾಣಿ ಶಾಸ್ತ್ರಾಣಿ' 'ಶಾಸ್ತ್ರಗಳು ಬ್ರಹ್ಮಜ್ಞಾನಿಗಳಲ್ಲದವರಿಗಾಗಿ" ಎಂದು ಶ್ರೀ ಶಂಕರಾಚಾರ್ಯರು ಅಲ್ಲಲ್ಲಿ ಉದ್ಘೋಷಿಸಿದ್ದಾರೆ. ಇದನ್ನನುಸರಿಸಿ ಪುಣ್ಯ ಪಾಪ, ಸ್ವರ್ಗನರಕ, ಈಶ್ವರಭಕ್ತ, ಗುರುಶಿಷ್ಯ, ಕ್ರಮ, ಪ್ರ ಮಾ ಣ, ಪ್ರಮೇಯ- ಮುಂತಾದವು ವ್ಯವಸ್ಥಿತವಾಗಿವೆ. ದ್ವೈತವು ವ್ಯಾವಹಾರಿತ ಸತ್ಯ. ಎಲ್ಲಿಯವರೆಗೆ ಬ್ರಹ್ಮವಸ್ತುವಿನ ಅಪರೋಕ್ಷ ಜ್ಞಾನವಾಗುವುದಿಲ್ಲವೋ ಅಲ್ಲಿಯವರೆಗೆ ವಿಧಿನಿಷೇಧಶಾಸ್ತ್ರಗಳೆಲ್ಲವೂ ಪ್ರಮಾಣಗಳೇ. ನಿಸ್ತ್ರೈಗುಣ್ಯನಾದ ಬ್ರಹ್ಮಜ್ಞಾನಿಗೆ ಸರ್ವವೂ ಬ್ರಹ್ಮಮಯವಾಗಿ ತೋರುವುದರಿಂದ ವಿಧಿನಿಷೇಧಗಳಿಗೆ ಅವನು ವಿಷಯನೇ ಆಗುವುದಿಲ್ಲ. ಆದ್ದರಿಂದ ಭಗವದ್ಗೀತೆಯಲ್ಲಿ ' ತ್ರೈಗುಣ್ಯವಿಷಯಾಥೀವೇದಾಃ ನಿಸ್ತ್ರೈಗುಣ್ಯೋಭವಾರ್ಜುನ" ಎಂದು ಭಗವಂತನು ಹೇಳಿರುತ್ತಾನೆ.

**೨ ವಿಚಾರ ಮಾರ್ಗ:** ಜನ್ಮಾಂತರಾರ್ಜಿವಾದ ಪುಣ್ಯದಿಂದ ಮನುಷ್ಯನಿಗೆ ಸತ್ಸಂಗವೂ ಸದ್ಗುರುಲಾಭವೂ ಆಗುತ್ತದೆ. ಇದರಿಂದ ಅವನು ಶಾಸ್ತ್ರಾನುಸಾರಿಯಾದ ವಿಚಾರಮಾರ್ಗವನ್ನೇರುತ್ತಾನೆ. ಆತನಿಗೆ ನಿತ್ಯಾನಿತ್ಯವಸ್ತುವಿವೇಕ, ಇಹಾಮುತ್ರಫಲಭೋಗವಿರಾಗ, ಶಮಾದಿಷಟ್ಕಸಂಪತ್, ಮುಮುಕ್ಷತ್ವ- ಎಂಬ ನಾಲ್ಕು ಸಾಧನಸಂಪತ್ತುಗಳು ಉಂಟಾಗುತ್ತವೆ. ಇವುಗಳ ಸಂಕ್ಷಿಪ್ತವಾದ ವಿವರಣೆ ಹೀಗೆ-

೧. ನಿತ್ಯಾನಿತ್ಯವಸ್ತುವಿವೇಕ:-ಪರಮಾತ್ಮನೊಬ್ಬನೇ ನಿತ್ಯ, ಉಳಿದುದೆಲ್ಲವೂ ಅನಿತ್ಯ, ನಾಶವಾಗತಕ್ಕದ್ದು ಎಂಬ ವಿವೇಕಬುದ್ಧಿ.

೨. ಇಹಾಮುತ್ರ ಫಲಭೋಗವಿರಾಗ:- ಮೇಲ್ಕಂಡ ವಿವೇಕದಿಂದ ಇದು ಹುಟ್ಟುತ್ತದೆ. 'ಈ ಲೋಕದ ಸುಖವಾಗಲಿ ಸ್ವರ್ಗದ ಸುಖವಾಗಲಿ ನನಗೆ ಬೇಡ. ಇದು ಅನಿತ್ಯ, ದುಃಖಸಂಮಿಶ್ರ' ಎಂಬ ಬುದ್ಧಿ.

೩. ಶಮಾದಿಷಟ್ಕಸಂಪತ್:- ಶಮ, ದಮ, ಉಪರತಿ, ತಿತಿಕ್ಷಾ, ಸಮಾಧಾನ, ಶ್ರದ್ಧೆ ಇವು ಶಮಾದಿಷಟ್ಕಗಳು. ಶಮ–ಮನೋನಿಗ್ರಹ. ದಮ-ಇಂದ್ರಿಯನಿಗ್ರಹ, ಉಪರತಿ-ವಿಷಯತ್ಯಾಗ' ಸಮಾಧಾನ-ಶೀತೋಷ್ಣಾದಿಗಳನ್ನು ಸಹಿಸಿಕೊಳ್ಳುವ ಮನೋಭಾವ, ಶ್ರದ್ಧೆ-ಶಾಸ್ತ್ರದಲ್ಲಿಯೂ ಗುರುವಾಕ್ಯದಲ್ಲಿಯೂ ಅಚಲವಿಶ್ವಾಸ ಇವು ಎರಡನೆಯ ಸಾಧನವಾದ ಫಲಭೋಗ ವಿರಾಗದಿಂದ ಬರತಕ್ಕವು.

೪. ಮುಮುಕ್ಷುತ್ವ:- ಇದು ಮುಕ್ತನಾಗಬೇಕೆಂಬ ತೀವ್ರವಾದ ಇಚ್ಛೆ. ಮೇಲ್ಕಂಡ ಮೂರು ಸಾಧನಗಳಿಂದ ಈ ಇಚ್ಛೆ ಹುಟ್ಟುತ್ತದೆ.



ಈ ಸಾಧನಗಳಿಂದ ಮಿಶ್ರಸುವ ಮಧ್ಯಮಾಧಿಕಾರಿಯೂ ಶ್ರವಣಮನನಗಳಿಂದ ವ್ಯಾವಹಾರಿಕ ವಸ್ತುಗಳೆಲ್ಲವೂ ಮಿಥ್ಯೆ, ಅಸತ್ಯ, ದುರ್ನಿರೂಪ, ಅನಿರ್ವಚನೀಯ, ಮಾಯಾಕಲ್ಪಿತ, ಸ್ವಪ್ನದ ವಸ್ತುಗಳಂತೆ ಕ್ಷಣಿಕ, ಅಸಾರ, ಹೇಯ-ಎಂಬುದನ್ನು ನಿಶ್ಚಯಿಸಿಕೊಳ್ಳುತ್ತಾನೆ. ಇವನು ಪರೋಕ್ಷಜ್ಞಾನಿಯ ಮಟ್ಟಕ್ಕೆ ಏರಬಹುದು.

**೩. ವಿಜ್ಞಾನ ಮಾರ್ಗ:** ಎರಡನೆಯ ವಿಚಾರ ಮಾರ್ಗದಲ್ಲಿ ಚೆನ್ನಾಗಿ ಶ್ರಮಿಸಿದವನು ಈ ವಿಜ್ಞಾನಮಾರ್ಗವನ್ನೇರುತ್ತಾನೆ. ಇವನು ಉತ್ತಮಾಧಿಕಾರಿ. ಜಾಗ್ರತ್, ಸ್ವಪ್ನ ಸುಷುಪ್ತಿಗಳೆಂಬ ಅವಸ್ಥಾತ್ರಯಕ್ಕೆ ಸಾಕ್ಷಿಯಾಗಿರುವ ಮತ್ತು ಅವಸ್ಥಾತ್ರಯವಿಲ್ಲದ ತುರೀಯವಾದ ಪರಬ್ರಹ್ಮವೇ ನಾನೆಂಬ ಪರಿಶುದ್ಧಜ್ಞಾನವನ್ನು ಈತನು ಪಡೆಯುತ್ತಾನೆ. ಈತನಿಗಾಗಿಯೇ ಶ್ರುತಿಯು 'ನೇತಿ ನೇತಿ' ಎಂಬ ಪ್ರತಿಷೇಧಮಾರ್ಗದಿಂದ ಆತ್ಮವ್ಯತಿರಿಕ್ತವಸ್ತು ಇಲ್ಲವೆಂದೂ ಆತ್ಮಸ್ವರೂಪವು ಅವರ್ಣನೀಯವಾಗಿದ್ದು 'ಇದಲ್ಲ, ಇದಲ್ಲ" ಎಂಬ ಪ್ರತಿಷೇಧ ಮಾರ್ಗದಿಂದಲೇ ಅದನ್ನು ಸಾಕ್ಷಾತ್ಕರಿಸಿಕೊಳ್ಳಬೇಕೆಂಬುದೂ ಉಪದೇಶಿಸುತ್ತದೆ. ಹೀಗೆ ಪರಿಶುದ್ಧಜ್ಞಾನವನ್ನು ಪಡೆದವನು ಅಪರೋಕ್ಷಜ್ಞಾನಿ ಎನಿಸುತ್ತಾನೆ; ಇವನು ಜೀವನ್ಮುಕ್ತ.

ಅಧಿಕಾರಿ ಭೇದದಿಂದ ಹೀಗೆ ಶಾಸ್ತ್ರವು ವ್ಯವಸ್ಥಿತವಾಗಿದೆ. ಆದ್ದರಿಂದ ಒಂದನ್ನೊಂದು ಕಲಬೆರೆಕೆಯಾಗಿ ತಿಳಿದುಕೊಂಡು ಅತಿಪ್ರಸಂಗದ ಶಂಕೆಯನ್ನು ಮಾಡತಕ್ಕದಲ್ಲ.

**ಅದ್ವೈತ ವೇದಾಂತದಲ್ಲಿ ಪದಾರ್ಥ ವಿಭಾಗ:** (ವ್ಯವಹಾರಾನುಸಾರಿಯಾದ ವಿಚಾರಮಾರ್ಗ)

ತತ್ತ್ವ, ಅತತ್ತ್ವ ಎಂದು ಪದಾರ್ಥವು ಎರಡು ವಿಧ. ತತ್ತ್ವವೆಂದರೆ ಆತ್ಮ. ಆತ್ಮನು ದೇಶಕಾಲಪರಿಚ್ಛೇದವಿಲ್ಲದ ವಿಭುವೂ ಶಾಶ್ವತವೂ ಆದ ಬ್ರಹ್ಮ. ಬ್ರಹ್ಮವು ಸಚ್ಚಿದಾನಂದಸ್ವರೂಪ, ಅದ್ವಿತೀಯ, ನಿತ್ಯಶುದ್ಧಬುದ್ಧ ಮುಕ್ತಸ್ವರೂಪ, ಸಪ್ತಸ್ವರೂಪ, ನಿರ್ಗುಣ, ನಿಷ್ಕ್ರಿಯ , ಪ್ರಶಾಂತ.

ತತ್ತ್ವಕ್ಕೆ ವ್ಯತಿರಿಕ್ತವಾದುದು ಅತತ್ತ್ವ. ನಮಗೆ ತೋರಿಬರುವ ಪ್ರಪಂಚವೆಲ್ಲವೂ ಅತತ್ತ್ವದಲ್ಲಿ ಸೇರುತ್ತದೆ. ಪ್ರತ್ಯಕ್ಷಾದಿ ಪ್ರಮಾಣಗಳಿಂದ ನಮಗೆ ಗೋಚರಿಸುವ ಘಟ, ಪಟ ಅಶ್ವ-ಮೊದಲಾದದೆಲ್ಲವೂ ಅತತ್ತ್ವಗಳು. ಇವು ವ್ಯಾವಹಾರಿಕವಾಗಿ ಸತ್ಯಗಳೇ ಹೊರತು ಪಾರಮಾರ್ಥಿಕವಾಗಿ ಇವು ಮಿಥ್ಯಾ ಎಂದು ಅಭಿಪ್ರಾಯ. ಘಟವನ್ನು ನೋಡಿ ಇದು ಗಡಿಗೆ ಎನ್ನುತ್ತೇವೆ. ಮಣ್ಣಿನ ರೂಪಬದಲಿಸಿದಂತೆ ಅದಕ್ಕೆ ಚಿಪ್ಪು, ಗಡಿಗೆ–ಎಂಬ ವಿಭಿನ್ನನಾಮಗಳು ಬರುತ್ತವೆ. ಆದ್ದರಿಂದಲೇ '**ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಂ**"

ಎನ್ನುತ್ತದೆ ಶ್ರುತಿ. 'ಎಲ್ಲವೂ ಮಣ್ಣಿನ ವಿಕಾರ, ಮಾತಿನಿಂದ ಮಾತ್ರವೇ ಇದು ವಿಭಿನ್ನವಾಗಿದೆ. ವಾಸ್ತವವಾಗಿ ಮಣ್ಣೆಂಬುದೇ ಸತ್ಯ'! ಇದು ಒಂದು ದೃಷ್ಟಾಂತ ಮಣ್ಣಿನ ಮೂಲವೇನೆಂದು ಶೋಧಿಸುತ್ತ ಹೋದಾಗ ಅಖಂಡವಾದ ಬ್ರಹ್ಮವೊಂದೇ ಉಳಿವುದೆಂದು ತಾತ್ಪರ್ಯ. ನಾಮರೂಪಗಳೆಲ್ಲವೂ ಕಲ್ಪಿತವಾದ್ದರಿಂದ ನಾಮರೂಪಾತ್ಮಕವಾದ ಜಗತ್ತು ಮಿಥ್ಯಾ. ಇದು ಅತತ್ತ್ವ.

ಅತತ್ತ್ವವು ಅನಿರ್ವಚನೀಯ, ಅತ್ಯಂತಾಸತ್- ಎಂದು ಎರಡು ವಿಧ. ಘಟಾಪಟಾದಿ ವಸ್ತುಗಳು ಅನಿರ್ವಚನೀಯವೆಂದರೇನೆಂಬುದನ್ನು ಮುಂದೆ ಅನಿರ್ವಚನೀಯ ಖ್ಯಾತಿಯನ್ನು ಪ್ರಸ್ತಾಪಿಸಿದಾಗ ವಿವರಿಸಲಾಗುತ್ತದೆ. ಅನಿರ್ವಚನೀಯವು ವ್ಯಾವಹಾರಿಕ, ಪ್ರಾತಿಭಾಸಿಕ- ಎಂದು ಎರಡು ವಿಧ. ವ್ಯವಹಾರಕ್ಕೆ ಗೋಚರಿಸುವ ಘಟಪಟಾದಿಗಳು ವ್ಯಾವಹಾರಿಕ. ಭ್ರಾಂತಿಯಿಂದ ಕಾಣುವ ರಜ್ಜು ಸರ್ಪ ಶುಕ್ತಿರಜತ ಮೊದಲಾದವೂ ಸ್ವಪ್ನದಲ್ಲಿ ಗೋಚರಿಸುವ ವಸ್ತುಗಳೂ ಪ್ರಾತಿಭಾಸಿಕ ವ್ಯಾವಹಾರಿಕ ಪ್ರಮಾಣಗಳಿಗೂ ಮಿಥ್ಯೆ ಎನಿಸಿ ಪ್ರತಿಭಾಸಕ್ಕೆ-ತೋರಿಕೆಗೆ ಮಾತ್ರ ವಿಷಯವಾಗುವುದರಿಂದ ಇವು ಪ್ರಾತಿಭಾಸಿಕಗಳು.

ಶಶಶೃಂಗ, ಗಗನಕುಸುಮ, ಕೂರ್ಮಕ್ಷೀರ-ಮೊದಲಾದವು ಅತ್ಯಂತಾಸತ್, ಈ ಶಬ್ದಗಳನ್ನು ಹೇಳಿದಾಗ ಅರ್ಥ ಮಾತ್ರದ ಪ್ರತೀತಿಯಾಗುತ್ತದೆ. ವ್ಯವಹಾರದಲ್ಲಿ ಇವು ಇಲ್ಲ. ಈ ಪ್ರತೀತಿಗೆ 'ವಿಕಲ್ಪ' ಎಂದು ಪಾರಿಭಾಷಿಕವಾದ ಹೆಸರು. ಈ ವಿಕಲ್ಪಗೋಚರವಾದ ಪದಾರ್ಥ ಅತ್ಯಂತಾಸತ್.

ಇವುಗಳಲ್ಲಿ ಅತ್ಯಂತಾಸತ್ತನ್ನು ಪರೀಕ್ಷಿಸಬೇಕಾದ್ದಿಲ್ಲ. ಇಲ್ಲದನ್ನು ಪರೀಕ್ಷಿಸುವುದಾದರೂ ಏಕೆ? ಪ್ರಾತಿಭಾಸಿಕವು ತಾತ್ಕಾಲಿಕವಾಗಿ ಸತ್ಯವೆನಿಸಿದರೂ ಪರೀಕ್ಷಿಸಿದಾಗ ವ್ಯವಹಾರದಲ್ಲಿ ಮಿಥ್ಯೆಯೇ. ಹಾಗೆಯೇ ವ್ಯಾವಹಾರಿಕವಾಗಿ ಸತ್ಯವೆನಿಸಿರುವುದೂ ಪರಮಾರ್ಥದಲ್ಲಿ ಜ್ಞಾನಿಗೆ ಮಿಥ್ಯೆಯೆಂದು ನಿಶ್ಚಿತವಾಗುವುದು.

ಪರೀಕ್ಷೆಗೆ ಉಪಯುಕ್ತವಾದವು ಪ್ರಮಾಣಗಳು. ಪ್ರತ್ಯಕ್ಷ, ಅನುಮಾನ, ಉಪಮಾನ, ಅರ್ಥಾಪತ್ತಿ, ಅನುಪಲಬ್ಧಿ, ಶಬ್ದ-ಎಂಬಿವು ಪ್ರಮಾಣಗಳು. ಉಪನಿಷದ್ರೂಪವಾದ ಶಬ್ದಪ್ರಮಾಣವು ಉಳಿದೆಲ್ಲ ಪ್ರಮಾಣಗಳಿಗಿಂತ ಪ್ರಬಲವಾದುದು 'ವ್ಯವಹಾರೇ ಭಟ್ಟನಯಃ' ಎಂಬ ಉದ್ಘೋಷದಂತೆ ವೇದಾಂತಿಗಳು ಭಟ್ಟಮೀಮಾಂಸಕರ ಮತವನ್ನನುಸರಿಸಿ ಹಲವಾರು ವ್ಯವಸ್ಥೆಗಳನ್ನು ಒಪ್ಪುತ್ತಾರೆ. ಅಲ್ಲಲ್ಲಿ ನ್ಯಾಯವೈಶೇಷಿಕಮತಗಳನ್ನು ವಾದಗ್ರಂಥಗಳಲ್ಲಿಅಂಗೀಕರಿಸಿರುವುದು ಕಂಡುಬರುತ್ತದೆ ಸೃಷ್ಟಿ ಪ್ರಕಾರವನ್ನು ಹೇಳುವಾಗ ಸಾಂಖ್ಯಮತದ ಕೆಲವು ಅಂಶಗಳನ್ನೂ ಸಾಧನ



ಪ್ರಕಾರಗಳನ್ನೂ ಸಾಧನ ಪ್ರಕಾರಗಳನ್ನೂ ಹೇಳುವಾಗ ಯೋಗಮತವನ್ನು ಅಂಗೀಕರಿಸಿದ್ದಾರೆ. ಆಯಾ ದಾರ್ಶನಿಕರೇ ಒಪ್ಪಿದ ವ್ಯವಸ್ಥೆಯನ್ನನುಸರಿಸಿ ಆ ಎಲ್ಲ ಇತರ ದರ್ಶನಗಳನ್ನು ಖಂಡಿಸುವ ಒಂದು ದಿಟ್ಟ ನಿಲವು ಅದ್ವೈತವಾದ ಗ್ರಂಥಗಳಲ್ಲಿದೆ. ವ್ಯವಹಾರವೆಲ್ಲವೂ ಕಲ್ಪಿತವಾದ್ದರಿಂದ ವ್ಯಾವಹಾರಿಕ ವ್ಯವಸ್ಥೆ ಹೀಗೆಯೇ ಇರಬೇಕೆಂಬ ನಿರ್ಬಂಧವಿಲ್ಲ. ಉದಾಹರಣೆಗೆ, ಅಭಾವವೆಂಬ ಪದಾರ್ಥವನ್ನೊಪ್ಪಬೇಕೆ? ಬೇಡವೆ? ಗುಣಾತಿರಿಕ್ತವಾದ ದ್ರವ್ಯವೆಂಬುದುಂಟೆ? ಅಥವಾ ಗುಣಸಮೂಹವೇ ದ್ರವ್ಯವೊ? ಎರಡೂ ಪಕ್ಷಗಳನ್ನಂಗೀಕರಿಸಿ ವಾದ ಮಾಡಿರುವ ಸಂದರ್ಭ ಅದ್ವೈತ ಗ್ರಂಥಗಳುಂಟು.

ಸೃಷ್ಟಿ: ವೇದಾಂತದಲ್ಲಿ ಪ್ರಪಂಚದ ಸೃಷ್ಟಿಕ್ರಮವು ಬಹುಶಃ ಸಾಂಖ್ಯಮತದಂತೆಯೇ ಇದೆ. ಸಾಂಖ್ಯರು ಪುರುಷ, ಪ್ರಕೃತಿ ಎಂಬ ಎರಡು ಮೂಲಪದಾರ್ಥಗಳನ್ನೊಪ್ಪುತ್ತಾರೆ. ಪುರುಷನೆಂದರೆ ಜೀವಾತ್ಮ; ಇವನು ನಿರ್ಗುಣ, ಉದಾಸೀನ, ಅಕರ್ತ. ಜೀವಾತ್ಮರು ವಸ್ತುತಃ ಅನಂತ ಸಂಖ್ಯೆಯಲ್ಲಿದ್ದಾರೆ. ಅವ್ಯಕ್ತವಾದ ಪ್ರಕೃತಿಯಿಂದ ವ್ಯಕ್ತವಾದ ಸಕಲ ಪ್ರಪಂಚದ ಸೃಷ್ಟಿಯೂ ಆಗಿದೆಯೆಂದು ಸಾಂಖ್ಯರ ಸಿದ್ಧಾಂತ.

ಆತ್ಮನು ನಿರ್ಗುಣ, ಉದಾಸೀನ, ಅಕರ್ತ ಎಂಬುದು ಅದ್ವೈತದರ್ಶನಕ್ಕೂ ಮಾನ್ಯವಿದೆ. ಆದರೆ ಜೀವಾತ್ಮರು ವಸ್ತುತಃ ಅನಂತರೆಂಬುದು ಅದ್ವೈತಿಗಳಿಗೆ ಸಂಮತವಲ್ಲ. ಕೇವಲ ಉಪಾಧಿಭೇದದಿಂದ ಜೀವರು ಅನಂತಸಂಖ್ಯೆಯಲ್ಲಿರುವಂತೆ ಭಾಸವಾಗುತ್ತದೆ. ಪ್ರಕೃತಿ ಪುರುಷರ ಆಚೆಗೆ ಪರಬ್ರಹ್ಮವೆಂಬ ಒಂದೇ ಮೂಲತತ್ತ್ವವಿದೆ. ಈ ಪರಬ್ರಹ್ಮದಿಂದಲೇ ಪ್ರಕೃತಿ ಪುರುಷ ಮೊದಲಾದವು ಹುಟ್ಟಿವೆ. ಸಾಂಖ್ಯಮತದಲ್ಲಿ ಪ್ರಕೃತಿಯು ಸ್ವತಂತ್ರ. ವೇದಾಂತದಲ್ಲಾದರೋ ಇದು ಸ್ವತಂತ್ರವಲ್ಲ, ಪರಮೇಶ್ವರನ ಇಚ್ಛೆಗೆ ಒಳಪಟ್ಟುದು. ಪ್ರಕೃತಿಯನ್ನು ವೇದಾಂತ ಪರಿಭಾಷೆಯಲ್ಲಿ ಮಾಯೆ ಎನ್ನುತ್ತಾರೆ. ಸಾಂಖ್ಯರು ಈಶ್ವರನನ್ನು ಒಪ್ಪುವುದಿಲ್ಲ, ಅದ್ವೈತಿಗಳು ಒಪ್ಪುತ್ತಾರೆ. ಮಾಯೋಪಹಿತ ಚೈತನ್ಯವೇ ಈಶ್ವರ.

ಪ್ರಕೃತಿಯು ಸತ್ವರಜಸ್ತಮೋ ಗುಣಗಳೆಂಬ ಗುಣತ್ರಯ ರೂಪವಾದದ್ದು ಇದಕ್ಕೆ ಅವ್ಯಕ್ತವೆಂದೂ ಹೆಸರು. ಅವ್ಯಕ್ತದಿಂದ ಮಹತ್, ಮಹತ್ತಿನಿಂದ ಅಹಂಕಾರ, ಅಹಂಕಾರದಿಂದ ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ಪಂಚತನ್ಮಾತ್ರೆಗಳು ಕ್ರಮವಾಗಿ ಉದಿಸಿದವು. ಶಬ್ದದಿಂದ ಸ್ಪರ್ಶ, ಸ್ಪರ್ಶದಿಂದ ರೂಪ, ಹೀಗೆ ಇವು ಆಕಾಶಾದಿಪಂಚಮಹಾಭೂತಗಳ ಸೂಕ್ಷ್ಮರೂಪಗಳು. ಇವು ತ್ರಿಗುಣಾತ್ಮಕ ಪ್ರಕೃತಿಜನ್ಯವಾದ್ದರಿಂದ ಒಂದೊಂದರಲ್ಲಿಯೂ ಮೂರು ಗುಣಗಳು ಸೇರಿಕೊಂಡಿವೆ. ಈ ತನ್ಮಾತ್ರೆಗಳ ಸತ್ತ್ವಗುಣಾಂಶದಿಂದ ಅಂತಃಕರಣ ಉದಿಸಿತು. ವೃತ್ತಿಭೇದದಿಂದ ಇದು ಮನಸ್ಸು, ಬುದ್ಧಿ, ಚಿತ್ತ, ಅಹಂಕಾರ ಎಂದು ನಾಲ್ಕು ವಿಧವಾಗಿವೆ. ಇದು ಪಂಚ

ತನ್ಮಾತ್ರೆಗಳ ಸಮಷ್ಟಿರೂಪ. ಅವುಗಳ ಸತ್ತ್ವಾಂಶದಿಂದಲೇ ವ್ಯಷ್ಟಿರೂಪದಲ್ಲಿ ಪಂಚ ಜ್ಞಾನೇಂದ್ರಿಯಗಳು ಹುಟ್ಟಿದವು. ಹೀಗೆಯೇ ಶಬ್ದಾದಿಗಳ ರಜೋಗುಣಾಂಶದಿಂದ ಸಮಷ್ಟಿರೂಪದಲ್ಲಿ ವ್ಯಾನ, ಉದಾನ, ಸಮಾನ, ಪ್ರಾಣ, ಅಪಾನಗಳೆಂಬ ಪಂಚ ವಾಯುಗಳೂ ವ್ಯಷ್ಟಿರೂಪದಲ್ಲಿ ವಾಕ್, ಪಾಣಿ, ಪಾದ, ಗುಹ್ಯ, ಗುದಗಳೆಂಬ ಪಂಚಕರ್ಮೇಂದ್ರಿಗಳೂ ಉದಿಸಿದವು. ಇಲ್ಲಿ ಕರ್ಮೇಂದ್ರಿಯಗಳೆಂದರೆ ಕೈ ಕಾಲು ಮೊದಲಾದ ಸ್ಥೂಲೇಂದ್ರಿಯಗಳಲ್ಲ ಇವುಗಳಲ್ಲಿ ಅಂತರ್ಗತವಾಗಿ ಇವುಗಳಿಗೆ ಶಕ್ತಿಯನ್ನೀಯುವ ಸೂಕ್ಷ್ಮೇಂದ್ರಿಯ.

ಅಂತಃಕರಣ ಚತುಷ್ಟಯ, ಜ್ಞಾನೇಂದ್ರಿಯ ಪಂಚಕ, ಕರ್ಮೇಂದ್ರಿಯ ಪಂಚಕ, ವಾಯು ಪಂಚಕ ಈ ೧೯ ತತ್ತ್ವಗಳು ಸೇರಿದ ಸಮೂಹಕ್ಕೆ ಸೂಕ್ಷ್ಮಶರೀರವೆಂದೂ ಲಿಂಗ ಶರೀರವೆಂದೂ ವ್ಯವಹಾರವಿದೆ.

ಪಂಚತನ್ಮಾತ್ರೆಗಳ ತಮೋಗುಣಾಂಶದಿಂದ ಆಕಾಶಾದಿ ಪಂಚಮಹಾಭೂತಗಳು ಹುಟ್ಟಿದವು. ಇವುಗಳಿಂದ ಪ್ರಾಣಿಗಳ ಸ್ಥೂಲಶರೀರದ ಉತ್ಪತ್ತಿ. ಆ ವಿದ್ಯೆಗೆ ಕಾರಣಶರೀರವೆಂದು ಹೆಸರಿದೆ ಈ ಸ್ಥೂಲ, ಸೂಕ್ಷ್ಮ, ಕಾರಣ ಶರೀರಗಳನ್ನು ತ್ರಿಪುರಗಳೆಂದೂ ಈ ತ್ರಿಪುರಗಳ ಅಭಿಮಾನವನ್ನು ನಾಶಮಾಡಿ ಮೋಕ್ಷವನ್ನೀಯುವ ಪರಮಾತ್ಮನನ್ನು ತ್ರಿಪುರಾಂತಕೇಶ್ವರ ಎಂದೂ ಪುರಾಣಗಳಲ್ಲಿ ವರ್ಣಿಸಿದೆ.

**ಪಂಚೀಕರಣ**: ಪಂಚೀಕರಣವೇನೆಂದರೆ ಐದಾಗಿ ವಿಭಾಗಿರುವುದೆಂದು ಅರ್ಥ. ಸ್ಥೂಲಸೃಷ್ಟಿಯನ್ನು ನಿರೂಪಿಸುವುದಕ್ಕಾಗಿ ಈ ಪ್ರಕ್ರಿಯೆಯನ್ನು ಬಳಸಲಾಗಿದೆ. ಶಬ್ದ ತನ್ಮಾತ್ರೆಗಳ ತಾಮಸಾಂಶದಿಂದ ಹುಟ್ಟಿದ ಆಕಾಶಾದಿ ಪಂಚಮಹಾಭೂತಗಳು ಪರಸ್ಪರ ಸಂಮಿಶ್ರವಾಗಿ ಸ್ಥೂಲ ಜಗತ್ತಿಗೆ ಕಾರಣವಾದವು ಎಂದು ಸಾರಾಂಶ. ಆಕಾಶದಲ್ಲಿ ಶುದ್ಧಾಕಾಶದ ಅರ್ಧಭಾಗ ಉಳಿದಿದೆ. ಉಳಿದ ಅರ್ಧವು ನಾಲ್ಕು ಭಾಗಗಳಾಗಿ ವಾಯು ಮೊದಲಾದ ಇತರ ನಾಲ್ಕು ಭೂತಗಳಲ್ಲಿ ಸೇರಿದೆ ಇದೇ ರೀತಿಯಲ್ಲಿ ಇತರ ಭೂತಗಳು ವಿಭಕ್ತವಾಗಿ ಉಳಿದ ನಾಲ್ಕು ಭೂತಗಳಲ್ಲಿ ಸೇರಿಕೊಂಡಿವೆ. ' ಆತ್ಮನ ಆಕಾಶಃ ಸಂಭೂತಃ, ಆಕಾಶಾದ್ವಾಯುಃ, ವಾಯೋರಗ್ನಿಃ ಇತ್ಯಾದಿ ತೈತ್ತಿರೀಯ ಶ್ರುತಿಯನ್ನು ಆಧರಿಸಿ ಈ ಪಂಚೀಕರಣ ಪ್ರಕ್ರಿಯೆ ಬಂದಿದೆ. ಛಾಂದೋಗ್ಯದ ಆರನೆಯ ಅಧ್ಯಾಯದಲ್ಲಿ ತೇಜಸ್ಸು, ಜಲ, ಪೃಥ್ವಿ ಈ ಮೂರರ ಸೃಷ್ಟಕ್ರಮವನ್ನು ಹೇಳಿದ್ದು, ಇದಕ್ಕೆ ತ್ರಿವೃತ್‌ಕರಣವೆಂದು ಹೆಸರಿದೆ. ಹೇಗಿದ್ದರೂ ತಾತ್ಪರ್ಯವು ಒಂದೇ ಎಂದು ಸಿದ್ಧಾಂತ. ಸೃಷ್ಟ್ಯಾದಿ ಪ್ರಪಂಚದ ವಿವರಣೆ ವೇದಾಂತಕ್ಕೆ ಮುಖ್ಯ ತಾತ್ಪರ್ಯವಲ್ಲವೆಂದೂ ಅದರಿಂದ ಯಾವ ಪುರುಷಾರ್ಥವೂ ದೊರೆಯದೆಂದೂ ಶ್ರೀ ಶಂಕರಾಚಾರ್ಯರು ಹೇಳಿದ್ದಾರೆ. (**ನಹ್ಯಯಂ ಸೃಷ್ಟ್ಯಾದಿ ಪ್ರಪಂಚವಿಷಯಃ ಪ್ರತಿಪಿಪಾದಯಿಷಿತಃ ನಹಿತತ್ಪ್ರತಿಬದ್ಧಃ ಕಶ್ಚಿತ್ ಪುರುಷಾರ್ಥೋ ದೃಶ್ಯತೇ ಶ್ರೂಯತೇ** ವಾ-ಸೂ. ಭಾ ೧-೪-೧೪)



**ಪ್ರಳಯ**: ಪ್ರಳಯವು ನಿತ್ಯ, ನೈಮಿತ್ತಿಕ, ಪ್ರಾಕೃತ, ಆತ್ಯಂತಿಕ-ಎಂದು ನಾಲ್ಕು ವಿಧ. ಪ್ರತಿದಿನವೂ ಜೀವರಿಗೆ ಒದಗುವ ಸುಷುಪ್ತಿ ನಿತ್ಯಪ್ರಳಯ. ಇದರಲ್ಲಿ ಜೀವರ ಸಮಸ್ತ ಶಕ್ತಿಗಳು ಕಾರಣರೂಪದಲ್ಲಿರುತ್ತವೆ. ಜಾಗ್ರತ್ತಿನಲ್ಲಿ ಕಾರ್ಯರೂಪಕ್ಕೆ ಬರುತ್ತವೆ. ಸುಷುಪ್ತಿಯಲ್ಲೂ ಕಾರಣರೂಪದಿಂದ ಇರುವ ಪ್ರಯುಕ್ತ ಪಾಪ, ಪುಣ್ಯ, ಸ್ಮೃತಿ-ಮೊದಲಾದುವುಗಳಿಗೆ ಬಾಧೆ ಇಲ್ಲ.

ಬ್ರಹ್ಮನ ಅಹೋರಾತ್ರಿಗಳಲ್ಲಿ ನಡೆಯುವ ಲೋಕತ್ರಯಪ್ರಳಯವೇ ನೈಮಿತ್ತಿಕ ಪ್ರಳಯ, ಇದು ಪುರಾಣ ಪ್ರಸಿದ್ಧ. ಪ್ರಕೃತಿಯೆಂಬ ಮಾಯೆಯಲ್ಲಿ ಬ್ರಹ್ಮಾಂಡವು ಲೀನವಾಗುವುದು ಪ್ರಾಕೃತಪ್ರಳಯ. ಇದು ಜೀವನ್ಮುಕ್ತರಿಗೆ ಲಭಿಸತಕ್ಕದ್ದು. ಇವರಿಗೆ ಪ್ರಾರಬ್ಧಕರ್ಮಲೇಶವಿರುವುದರಿಂದ ಲೋಕಾನುಗ್ರಹಕ್ಕಾಗಿ ಶಾಸ್ತ್ರೋಪದೇಶವನ್ನು ಮಾಡುತ್ತಿರುವರು. ಆತ್ಯಂತಿಕ ಪ್ರಳಯವೆಂದರೆ ಮೋಕ್ಷ; ವಿದೇಹಕೈವಲ್ಯ. ಬ್ರಹ್ಮಸಾಕ್ಷಾತ್ಕಾರದಿಂದಾಗುವ ಅವಿದ್ಯಾನಿವೃತ್ತಿಯೇ ಇದು.

**ಈಶ್ವರ**: ಅದ್ವೈತದರ್ಶನದಲ್ಲಿ ಸರ್ವಜ್ಞನೂ ಸರ್ವಶಕ್ತನೂ ಅಂತರ್ಯಾಮಿಯೂ ಜಗನ್ನಿಯಾಮಕನೂ ಆದ ಈಶ್ವರನಿದ್ದಾನೆಂದು ಒಪ್ಪಲಾಗಿದೆ. ಈಶ್ವರನೆಂದರೆ ಈಶಿತವ್ಯವಾದ ಎಂದರೆ ನಿಯಮ್ಯವಾದ ಜಗತ್ತು ಇರಬೇಕು. ಜಗತ್ತು ಮಾಯಕಲ್ಪಿತವಾದ್ದರಿಂದ ಈಶ್ವರನು ಮಾಯೋಪಾಧಿಯೆಂದು ಅಂಗೀಕರಿಸಬೇಕು ಜಗತ್ಕಾರಣವಾದ ಬ್ರಹ್ಮವೇ ಜಗತ್ತಿನ ಅಪೇಕ್ಷೆಯಿಂದ ಈಶ್ವರನೆನಿಸುತ್ತದೆ. ಸಂಸಾರಕ್ಕೆ ಬೀಜವಾದ ಮಾಯೆ, ಶಕ್ತಿ ಅಥವಾ ಪ್ರಕೃತಿಯನ್ನು ಸ್ವಾಧೀನಪಡಿಸಿಕೊಂಡಿರುವ ಮಾಯಾ ವಿಶಿಷ್ಟ ಬ್ರಹ್ಮವೇ ಈಶ್ವರ. 'ಮಾಯಾಂತು ಪ್ರಕೃತಿಂ ವಿದ್ಯಾತ್ ಮಾಯಿನಂತು ಮಹೇಶ್ವರಂ' 'ಅವಿದ್ಯಾಕೃತನಾಮರೂಪೋಪಾಧ್ಯನುರೋಧೀ ಈಶ್ವರಃ (ಸೂ.ಭಾ. ೨-೧-೧೪). ಈಶ್ವರನು 'ಶಾಸ್ತ್ರಯೋನಿ' ಎಂದರೆ ವೇದಗಳ ಉದ್ಗಮ ಸ್ಥಾನ. ಈಶ್ವರನು ಮಾಯಾಶಕ್ತಿಗೆ ಒಡೆಯ. ಜೀವರಾದರೋ ಅದಕ್ಕೆ ಅಧೀನರು, ಅಲ್ಪಜ್ಞರು, ಅಲ್ಪಶಕ್ತರು.

ಈಶ್ವರನು ಒಬ್ಬನೇ ಲೋಕಾನುಗ್ರಹಕ್ಕಾಗಿ-ಭಕ್ತರ ಉದ್ಧಾರಕ್ಕಾಗಿ ಆತನು ತನ್ನ ಮಾಯೆಯಿಂದ ವಿಭಿನ್ನರೂಪಗಳನ್ನು ತಳೆಯಬಹುದು ಜಗತ್ತಿನಲ್ಲಿ ಅವತರಿಸಬಹುದು. ಈಶ್ವರನ ಉಪಾಸನೆಯಿಂದ ಜೀವರಿಗೆ ಕಲ್ಯಾಣಉಂಟು. ದೈವಭಕ್ತಿ ಮೋಕ್ಷಸಾಧನಗಳಲ್ಲಿ ಉತ್ತಮವಾದುದು. 'ಈಶ್ವರಾನುಗ್ರಹಾದೇವ ಪುಂಸಾಮದ್ವೈತವಾಸನಾ' (ಪಂಚದಶೀ)

ಈಶ್ವರನು ಜಗತ್ತಿಗೆ ಕಾರಣನೆಂಬಾಗ ಮಾಯೆಯನ್ನು ಪ್ರಧಾನವಾಗಿಟ್ಟು ಉಪಾದಾನಕಾರಣನೆಂದೂ ಚೈತನ್ಯವನ್ನು ಪ್ರಧಾನವಾಗಿ ತಿಳಿದು ನಿಮಿತ್ತಕಾರಣನೆಂದೂ ಗ್ರಹಿಸಬೇಕು. ಏಕೆಂದರೆ, ಮಾಯಾವಿಶಿಷ್ಟ ಚೈತನ್ಯವೇ ಈಶ್ವರ.

**ಜೀವ:** ಪ್ರತಿಯೊಬ್ಬರಲ್ಲಿಯೂ ‘ನಾನು’ ಎಂಬ ಅಹಂಪ್ರತ್ಯಯಗಮ್ಯನಾದ ಆತ್ಮನೇ ಜೀವ. ಈಶ್ವರನಾದರೋ ಜೀವನನ್ನು ತನ್ನ ಚೈತನ್ಯದಿಂದ ಬೆಳಗುತ್ತಿರುವ ಸಾಕ್ಷಿ. ಜೀವನು ಈಶ್ವರನಾದ ಸಾಕ್ಷಿಗೆ ವಿಷಯ. ಜೀವನು ದೇಹಾದಿಸಂಘಾತದಲ್ಲಿರುವವನು. ಸುಖದುಃಖಗಳನ್ನು ಅನುಭವಿಸತಕ್ಕವನು. ಪ್ರತಿದೇಹಕ್ಕೂ ಒಬ್ಬನಾಗಿ ಅನಂತಸಂಖ್ಯೆಯಲ್ಲಿದ್ದಾನೆ. ಸೂರ್ಯನು ಒಬ್ಬನೇ ಆದರೂ ವಿಭಿನ್ನ ಜಲಾಶಯಗಳಲ್ಲಿ ಕಾಣುವ ಸೂರ್ಯಪ್ರತಿಬಿಂಬಗಳು ಹೇಗೆ ಅನಂತವೋ ಹಾಗೆ, ಈತನು ವ್ಯವಹಾರದೃಷ್ಟಿಯಿಂದ ಮಾತ್ರ ದೇಹಸಂಬಂಧ ಉಳ್ಳವನು. ‘ನಾನು ನನ್ನವು’ ಎಂಬ ಅಭಿಮಾನ ಈತನಿಗೆ ದೇಹೇಂದ್ರಿಯಗಳಲ್ಲಿದೆ. ಬ್ರಹ್ಮವೇ ಜೀವನಾಗಿ ತೋರುತ್ತದೆ. ಇದನ್ನು ಆತ್ಮಾಧ್ಯಾಸವೆಂದೂ ಅಂತಃಕರಣೋಪಹಿತ ಚೈತನ್ಯವೆಂದೂ ಹೇಳುತ್ತಾರೆ. ಜೀವನಿಗೆ ಜನನಮರಣಗಳಿಲ್ಲ. ಜನನವೆಂದರೆ ಶರೀರ ಸಂಯೋಗ. ಮರಣವೆಂದರೆ ಶರೀರವಿಯೋಗ.

ಜೀವನಿಗೆ ಬ್ರಹ್ಮಸ್ವಭಾವವೇ ಇದೆಯಾದ್ದರಿಂದ ಅವನು ಜ್ಞಾನಸ್ವರೂಪನೇ. ಹಾಗಾದರೆ ಇಂದ್ರಿಯಗಳಿಂದ ಆಗಬೇಕಾದದ್ದೇನು? ಎನ್ನಬಹುದು. ರೂಪ, ಗಂಧ- ಮುಂತಾದ ವಿಷಯ ವಿಶೇಷವನ್ನು ವಿಂಗಡಿಸಿ ತಿಳಿಯುವುದಕ್ಕಾಗಿ ಇಂದ್ರಿಯಗಳು ಬೇಕು. ಹಾಗಾದರೆ ಸುಷುಪ್ತಿಯಲ್ಲಿ ಜ್ಞಾನವೇಕಿಲ್ಲ? ಏಕಿಲ್ಲವೆಂದರೆ, ಅಲ್ಲಿ ಬೆಳಗಲ್ಪಡಬೇಕಾದ ವಿಷಯವೇ ಇಲ್ಲವಾದ್ದರಿಂದ ‘ವಿಷಯಾಭಾವಾದಿಯಮಚೇತಯಮಾನತಾ, ನ ತು ಚೈತನ್ಯಾಭಾವಾತ್-(ಸೂ.ಭಾ. ೨-೩-೧೮)’ ಸುಷುಪ್ತಿಯಲ್ಲಿ ಸ್ವರೂಪ ಜ್ಞಾನವೂ ಸುಖಾನುಭವವೂ ಉಂಟು.

ಜೀವನು ಬ್ರಹ್ಮಸ್ವರೂಪವೇ ಆದ್ದರಿಂದ ಅವನು ಹುಟ್ಟುವುದೂ ಇಲ್ಲ, ಸಾಯುವುದೂ ಇಲ್ಲ. ಮಹಾಕಾಶದಿಂದ ಘಟಾಕಾಶಗಳು ಉತ್ಪನ್ನವಾಗುವಂತೆ ಜೀವರು ಬ್ರಹ್ಮದಿಂದ ಹುಟ್ಟುವಂತೆ ತೋರುತ್ತಾರೆ. ಘಟದೊಳಗಿನ ಆಕಾಶ ಮಹಾಕಾಶವಲ್ಲದೆ ಬೇರೆಯಲ್ಲ. ವಸ್ತುತಃ ಘಟವೂ ಆಕಾಶದ ಕಾರ್ಯವೇ. ಅದೂ ಆಕಾಶಕ್ಕಿಂತ ಬೇರೆಯಲ್ಲ. ದೇಹವೂ ಬ್ರಹ್ಮಕ್ಕಿಂತ ಬೇರೆಯಲ್ಲ.

ಒಂದು ಘಟಕಾಶದಲ್ಲಿ ಧೂಳಿ, ಹೊಗೆ ಮುಂತಾದದ್ದು ಸೇರಿಕೊಂಡಿದ್ದರೆ ಅದು ಇತರ ಘಟಕಾಶಗಳಲ್ಲಿ ಸೇರಿಕೊಂಡಿರುವುದಿಲ್ಲ. ಘಟವೇ ಅದಕ್ಕೆ ಪರಿಚ್ಛೇದಕ. ಹಾಗೆಯೇ ಜೀವರ ಸುಖದುಃಖ, ಪಾಪ ಪುಣ್ಯಾದಿಗಳು ಆಯಾ ಜೀವರಿಗೆ ಮಾತ್ರ ಸಂಬಂಧಿಸಿದವು. ಪರಮಾರ್ಥದಲ್ಲಿ ಧೂಳಿ ಹೊಗೆಗಳಿಗೂ ಆಕಾಶಕ್ಕೂ ಸಂಬಂಧವೇ ಇಲ್ಲ. ಆಕಾಶವು ಅಮೂರ್ತಸ್ವಭಾವವಾಗಿರುವುದರಿಂದ ಯಾವುದೂ ಅದಕ್ಕೆ ಅಂಟಿಕೊಳ್ಳುವುದಿಲ್ಲ. ಸುಖ, ದುಃಖ, ರಾಗ, ದ್ವೇಷಾದಿಗಳು ಜೀವನಿಗೆ ಸೇರಿದವುಗಳಲ್ಲ. ಪರಮಾರ್ಥದಲ್ಲಿ ಅಂತಃಕರಣಕ್ಕೆ ಸೇರಿದವು.



ಅಂತಃಕರಣೋಪಹಿತ ಚೈತನ್ಯವೇ ಜೀವ. ಚೈತನ್ಯ ಸ್ವರೂಪನಾದ ಆತ್ಮನು ಅಂತಃಕರಣ ಸಂಬಂಧದಿಂದ ಸಂಸಾರಿಯಾಗಿ ಜೀವನೆನಿಸಿದ್ದಾನೆ. ಅಂತಃಕರಣವು ಅಣುವಾದ್ದರಿಂದ ಜೀವಗೂ ಅಣುಪರಿಮಾಣನೆಂದು ಹೇಳುವುದುಂಟು. ಕೈಗನ್ನಡಿಯಲ್ಲಿ ಸೂರ್ಯನ ಪ್ರತಿಬಿಂಬವನ್ನು ಕಂಡು ಸೂರ್ಯನು ಚಿಕ್ಕವನೆಂದು ಹೇಳಿದಂತೆ ಜೀವನಿಗೆ ಸ್ತ್ರೀ, ಪುರುಷ, ನಪುಂಸಕ ಎಂಬ ಭೇದವಿಲ್ಲ. ಆ ವ್ಯವಹಾರ ದೇಹೋಪಾಧಿಯಿಂದ ಬಂದಿದೆ. ಜೀವನ ಕರ್ತೃತ್ವ, ಭೋಕ್ತೃತ್ವಗಳು ಔಪಾಧಿಕವಾದವು, ಸ್ವಾಭಾವಿಕವಲ್ಲ.

**ಅಧ್ಯಾಸ:** ಅಧ್ಯಾಸವೆಂದರೆ ಸಾಮಾನ್ಯವಾಗಿ ಭ್ರಮೆಯೆಂದು ಹೇಳಬಹುದು. ‘ಸ್ಮೃತಿರೂಪಃ, ಪರತ್ರಪೂರ್ವದೃಷ್ಟಾವಭಾಸಃ’ ಎಂದು ಭಾಷ್ಯಕಾರರು ಸೂತ್ರ ಭಾಷ್ಯದ ಆರಂಭದಲ್ಲಿ ಇದರ ಲಕ್ಷಣವನ್ನು ಹೇಳಿದ್ದಾರೆ. ‘ನೆನಪಿನ ರೂಪವಾಗಿರುವ, ಇನ್ನೊಂದರಲ್ಲಿ ಹಿಂದೆ (ಮತ್ತೊಂದೆಡೆ) ಕಂಡುದರ ತೋರಿಕೆ ಅಧ್ಯಾಸ’ ‘ಎರಡರ ವಿವೇಚನೆಯಿಲ್ಲದೆ ಉಂಟಾದ ಭ್ರಮೆ’ ‘ಒಂದರಲ್ಲಿ ಬೇರೊಂದರ ಧರ್ಮವನ್ನು ಕಲ್ಪಿಸುವುದು’ ಒಟ್ಟಿನಲ್ಲಿ ಅಧ್ಯಾಸವೆಂದರೆ ಮಿಥ್ಯಾಜ್ಞಾನ. ಈ ಪ್ರಕರಣದಲ್ಲಿಯೇ ‘ಅಧ್ಯಾಸೋ ನಾಮ ಅತಸ್ಮಿನ್‌ತದ್ಬುದ್ಧಿಃ’ ಎಂದೂ ಭಾಷ್ಯದಲ್ಲಿದೆ. ‘ಅಧ್ಯಾಸವೆಂದರೆ, ಅದಲ್ಲದ್ದರಲ್ಲಿ ಅದೆಂಬ ಬುದ್ಧಿ’

ಪರಮಾರ್ಥದಲ್ಲಿ ‘ಅಹಂ’ ಎಂದರೆ ಆತ್ಮ. ಆದರೆ ಮನುಷ್ಯನು ದೇಹೇಂದ್ರಿಯ ಸಂಘಾತವನ್ನು ‘ಅಹಂ’ ಎಂದು ತಿಳಿದಿದ್ದಾನೆ. ಇದು ಅಧ್ಯಾಸ. ಆತ್ಮನಲ್ಲಿ ದೇಹೇಂದ್ರಿಯ ಸಂಘಾತ ಅಧ್ಯಸ್ತ. ರಜ್ಜುವನ್ನು ಸರ್ಪವೆಂದು ತಿಳಿಯುವುದು ಅಧ್ಯಾಸ. ರಜ್ಜುವಿನಲ್ಲಿ ಸರ್ಪವು ಅಧ್ಯಸ್ತ. ಬ್ರಹ್ಮವನ್ನು ಜಗತ್ತೆಂದು ತಿಳಿಯುವುದು ಅಧ್ಯಾಸ. ಲೋಕ ವ್ಯವಹಾರವೆಲ್ಲವೂ ಈ ಅಧ್ಯಾಸದಿಂದ ನಡೆಯುತ್ತದೆ. ಏಕೆಂದರೆ ವ್ಯವಹಾರದಲ್ಲಿ ‘ನಾನು, ಜಗತ್ತು’ ಎಂಬ ಎರಡು ಅಂಶ ಸೇರಿಕೊಂಡೇ ಇರುತ್ತದೆ. ‘ಸತ್ಯಂ ಜ್ಞಾನಮನಂತಂ ಬ್ರಹ್ಮ’ ‘ಸ ಆತ್ಮಾ, ತತ್ತ್ವಮಸಿ’ ಮುಂತಾದ ಶ್ರುತಿ ವಾಕ್ಯಗಳಿಂದ ಸಚ್ಚಿದಾನಂದವೂ ಅನಂದವೂ ಆದ ಬ್ರಹ್ಮವೇ ಪರಮಾರ್ಥದಲ್ಲಿ ‘ನಾನು’ ಎಂದು ಗೊತ್ತಾಗಿದೆ. ಹಾಗೆಯೇ “ಸರ್ವಂ ಖಲ್ವಿದಂ ಬ್ರಹ್ಮ” ಇತ್ಯಾದಿ ಶ್ರುತಿಗಳಿಂದ ಜಗತ್ತೆಲ್ಲವೂ ವಾಸ್ತವವಾಗಿ ಬ್ರಹ್ಮ ಸ್ವರೂಪವೆಂದು ತಿಳಿದು ಬರುತ್ತದೆ. ‘ಯಸ್ಯ ಸರ್ವಮಾತ್ಮೈವಾಭೂತ್ ತತ್‌ಕೇನ ಕಂ ಪಶ್ಯೇತ್.... ಎಂಬಂತೆ ಸರ್ವವೂ ಬ್ರಹ್ಮಮಯವೆಂಬ ಅರಿವೂ ಬಂದಾಗ ವ್ಯವಹಾರ ನಡೆಯಲು ಶಕ್ಯವೇ ಇಲ್ಲ: ಅಧ್ಯಾಸದಿಂದ ದ್ವೈತಬುದ್ಧಿ ಇರುವಾಗಲೇ ವ್ಯವಹಾರ ಸಾಧ್ಯ.

**ವಿವರ್ತವಾದ:** ಆತ್ಮನಿಂದ ಜಗತ್ತು ಹುಟ್ಟುತ್ತದೆ. ಬೀಜದಿಂದ ಮೊಳಕೆ ಹುಟ್ಟುತ್ತದೆ. ಹಾಲಿನಿಂದ ಮೊಸರಾಗುತ್ತದೆ–ಇಂಥ ಸ್ಥಳಗಳಲ್ಲಿ ಆತ್ಮ, ಬೀಜ,

ಹಾಲು-ಇವು ಕಾರಣ. ಜಗತ್ತು, ಮೊಳಕೆ, ಮೊಸರು- ಇವು ಕಾರ್ಯ. ಕಾರ್ಯ ಕಾರಣಭಾವವನ್ನು ಹೇಳುವಾಗ ದಾರ್ಶನಿಕರಲ್ಲಿ ವಿಭಿನ್ನಮತಗಳಿವೆ. ಮುಖ್ಯವಾದ ನಾಲ್ಕನ್ನು ನೋಡೋಣ: ಕಾರಣಕ್ಕಿಂತ ಭಿನ್ನವಾಗಿ ಮೊದಲು ಇಲ್ಲದ ಹೊಸ ಕಾರ್ಯವು ಹುಟ್ಟುತ್ತದೆ, ಎಂಬುದೊಂದು ವಾದ. ಇದು ಅಸತ್ಕಾರ್ಯವಾದ. ಇದು ತಾರ್ಕಿಕಸಂಮತ. ಕಾರಣಕ್ಕಿಂತ ಕಾರ್ಯವು ಅತ್ಯಂತ ಭಿನ್ನವಲ್ಲವೆಂದೂ, ಹಾಲೇ ಮೊಸರಾಗಿಯೂ ಬೀಜವೇ ಮೊಳಕೆಯಾಗಿಯೂ ಪರಿಣಮಿಸುವುದೆಂದೂ ಇನ್ನೊಂದು ವಾದ. ಇದು ಪರಿಣಾಮ ವಾದ. ಸಾಂಖ್ಯಸಂಮತ. ಇವನ್ನು ಸತ್ಕಾರ್ಯವಾದವೆಂದೂ ಹೇಳುತ್ತಾರೆ. ಅದ್ವೈತದರ್ಶನವು ತಾರ್ಕಿಕರ ಅಸತ್ಕಾರ್ಯವಾದವನ್ನು ಒಪ್ಪುವುದಿಲ್ಲ. ವ್ಯವಹಾರ ಸ್ಥಿತಿಯಲ್ಲಿ ಸಾಂಖ್ಯರ ಪರಿಣಾಮವಾದವನ್ನು ಅಂಗೀಕರಿಸಿದರೂ ಪರಮಾರ್ಥ ಸ್ಥಿತಿಯಲ್ಲಿ ಅಂಗೀಕರಿಸುವುದಿಲ್ಲ. ಏಕೆಂದರೆ, 'ಆತ್ಮನಿಂದ ಜಗತ್ತು ಹುಟ್ಟುತ್ತದೆ' ಎಂಬಲ್ಲಿ ಅಸತ್ಕಾರ್ಯವಾದಕ್ಕೆ ಅವಕಾಶವೇ ಇಲ್ಲ; ಆತ್ಮಾತಿರಿಕ್ತವಾದ ಇನ್ನೊಂದು ವಸ್ತುವೇ ಇಲ್ಲವಾದ್ದರಿಂದ. ಆತ್ಮನು ನಿಮಿತ್ತಕಾರಣನೆನ್ನುವುದು ಸರಿಯಲ್ಲ, ಆತ್ಮನು ಅಕರ್ತನೆಂದು ಶ್ರುತಿಯು ಸಾರುವುದರಿಂದ, ಪರಿಣಾಮ ವಾದವೂ ಅಂಗೀಕಾರ್ಯವಲ್ಲ, ಆತ್ಮವು ಜಗತ್ತಾಗಿ ಪರಿಣಮಿಸುವುದಿಲ್ಲವಾದ್ದರಿಂದ. ಆತ್ಮನು ಅಪರಿಣಾಮಿ, ಅವಯವರಹಿತ, ಕೂಟಸ್ಥ. ಪರಿಣಾಮವಾದದಲ್ಲಿ ಕಾರಣಕ್ಕೆ ಅವಯವಗಳಿದ್ದು ಅದು ರೂಪಾಂತರವನ್ನು ಹೊಂದುತ್ತದೆ. ಅಲ್ಲದೆ ಕಾರ್ಯದ ಗುಣಗಳನ್ನು ಕಾರಣವು ಪಡೆದಿರುತ್ತದೆ. ಆತ್ಮನಾದರೋ ಅವಯವ ರಹಿತ. ಕಾರ್ಯವಾದ ಜಗತ್ತಿನ ಗುಣಧರ್ಮಗಳು ಆತ್ಮನಲ್ಲಿಲ್ಲ.

ಆದ್ದರಿಂದ ಅದ್ವೈತವು ವಿವರ್ತವಾದವನ್ನು ಎತ್ತಿಹಿಡಿದಿದೆ. ವಿವರ್ತವೆಂದರೆ ಒಂದು ವಸ್ತು ಯಾವ ಬದಲಾವಣೆಯನ್ನು ಹೊಂದದೆ ಇನ್ನೊಂದು ವಸ್ತುವಾಗಿ ತೋರುವುದು. ರಜ್ಜುಸರ್ಪಸ್ಥಳ ಉದಾಹರಣೆ. ಹಗ್ಗವು ಹಾವಾಗಿ ಭ್ರಾಂತನಿಗೆ ಕಾಣುತ್ತದೆ. ಹಗ್ಗದಲ್ಲಿ ಯಾವ ಬದಲಾವಣೆಯೂ ಆಗಿರುವುದಿಲ್ಲ. ಅದು ಇದ್ದಂತೆಯೇ ಇರುತ್ತದೆ. ಹಾಗೆ ಅದ್ವಿತೀಯನಾದ ಆತ್ಮನು ವಿವರ್ತದಿಂದ ವಿವಿಧ ನಾಮ ರೂಪಗಳನ್ನು ಪಡೆದ ಜಗತ್ತಾಗಿ ಕಾಣುತ್ತಾನೆ.

**ಅನಿರ್ವಚನೀಯ ಖ್ಯಾತಿ:** ಖ್ಯಾತಿಯೆಂದರೆ ಪ್ರತೀತಿ. ಜ್ಞಾನ ಇದನ್ನು ಮುಖ್ಯವಾಗಿ ಭ್ರಾಂತಿಸ್ಥಳದಲ್ಲಿ ಬಳಸುತ್ತಾರೆ. ಆತ್ಮಖ್ಯಾತಿ, ಅಸತ್ ಖ್ಯಾತಿ, ಅಖ್ಯಾತಿ, ಅನ್ಯಥಾಖ್ಯಾತಿ, ಅನಿರ್ವಚನೀಯಖ್ಯಾತಿ-ಎಂದು ಖ್ಯಾತಿಪಂಚಕ. ಅದ್ವೈತಸಿದ್ಧಾಂತವು ಅನಿರ್ವಚನೀಯ ಖ್ಯಾತಿಯನ್ನೊಪ್ಪುತ್ತದೆ.

ಹಗ್ಗವನ್ನು ಹಾವೆಂದೂ, ಕಪ್ಪೆ ಚಿಪ್ಪನ್ನು ಬೆಳ್ಳಿಯೆಂದೂ ದಾಸವಾಳ ಹೂವಿನ ಬಳಿ ಇರುವ ಸ್ಫಟಿಕವನ್ನು ಕೆಂಪು ಸ್ಫಟಿಕವೆಂದೂ ತಿಳಿಯುವುದು ಭ್ರಾಂತಿ. ಸಮೀಪಕ್ಕೆ ಹೋಗಿ ಪರೀಕ್ಷಿಸಿದಾಗ ಹಾವೂ, ಬೆಳ್ಳಿಯೂ, ಸ್ಫಟಿಕದ ಕೆಂಪೂ ನಿವೃತ್ತವಾಗಿ, ಇದು ಹಗ್ಗ, ಇದು ಕಪ್ಪೆಚಿಪ್ಪು, ಇದು ಬೆಳ್ಳಗಿರುವ ಸ್ಫಟಿಕವೆಂಬ ಜ್ಞಾನ ಉಂಟಾಗುತ್ತದೆ. ಮೊದಲು ಬಂದ ಜ್ಞಾನ ಬಾಧಿತವಾಗುವುದರಿಂದ ಅದು ಭ್ರಾಂತಿ; ಮಿಥ್ಯಾಜ್ಞಾನ. ಹಗ್ಗದಲ್ಲಿ ಕಂಡ ಹಾವು ಸತ್ ಅಲ್ಲ' ಮುಂದೆ ಬಾಧಿವಾಗುವುದರಿಂದ ಅದು ಗಗನಕುಸುಮದಂತೆ ಅಸತ್ ಅಲ್ಲ, ಆ ಕಾಲದಲ್ಲಿ ಪ್ರತೀತವಾಗುವುದರಿಂದ, ಏಕಕಾಲದಲ್ಲಿ ಸತ್, ಅಸತ್ ಎರಡೂ ಆಗಲಾರದು, ವಿರುದ್ಧವಾದ್ದರಿಂದ. ಆದ್ದರಿಂದ ಇದು ಸದಸದ್ವಿಲಕ್ಷಣ, ಅನಿರ್ವಚನೀಯ. ಈ ಭ್ರಾಂತಿ, ಭ್ರಾಂತಿವಿಷಯವಾದ ಸರ್ಪ-ಎರಡೂ ಅನಿರ್ವಚನೀಯ. ಹೀಗೆ ಪರಬ್ರಹ್ಮದಲ್ಲಿ ಅಧ್ಯಸ್ತವಾದ ಪ್ರಪಂಚ ಅನಿರ್ವಚನೀಯ. ಏಕೆಂದರೆ ಪರಮಾರ್ಥಾವಸ್ಥೆಯಲ್ಲಿ ಪ್ರಪಂಚವು ಬಾಧಿತವಾಗಿ 'ಸರ್ವಂ ಖಲ್ವಿದಂ ಬ್ರಹ್ಮ' ಎಂಬ ಅನುಭವ ಬರುತ್ತದೆ.

ಹಗ್ಗವನ್ನು ನೋಡಿ ಹಾವು ಎಂಬ ಯಾವ ಪ್ರತೀತಿ ಬರುವುದೋ ಅದಕ್ಕೆ ಖ್ಯಾತಿ ಎಂದು ಹೆಸರು. ಅದರ ನಿವೃತ್ತಿಗೆ ಬಾಧೆ ಎಂದು ಹೆಸರು. ಶಶಶೃಂಗ, ಗಗನಕುಸುಮ-ಮೊದಲಾದವು ಅತ್ಯಂತಾಸತ್. ಅವುಗಳಿಗೆ ಇಂದ್ರಿಯಗಳಿಂದ ಹುಟ್ಟುವ ಖ್ಯಾತಿ ಇಲ್ಲ. ಯಾವುದು ಸತ್ ಆಗಿದೆಯೋ ಅದಕ್ಕೆ ಬಾಧೆ ಇಲ್ಲ. ಯಾವುದಕ್ಕೆ ಮೊದಲು ಖ್ಯಾತಿಯೂ ಅನಂತರ ಬಾಧೆಯೂ ಇದೆಯೋ ಅದು ಅನಿರ್ವಚನೀಯ. ವ್ಯವಹಾರದಶೆಯಲ್ಲಿ ಪ್ರಪಂಚದ ಖ್ಯಾತಿಯಿದೆ. ಬ್ರಹ್ಮಜ್ಞಾನವಾದಾಗ ಪ್ರಪಂಚಕ್ಕೆ ಬಾಧೆಯಿದೆ. ಸುಷುಪ್ತಿಯಲ್ಲಿ ಪ್ರಪಂಚದ ನಿವೃತ್ತಿ ಸರ್ವಾನುಭವಸಿದ್ಧವೂ ಹೌದು. ಆದ್ದರಿಂದ ಪ್ರಪಂಚ ಅನಿರ್ವಚನೀಯ.

ಹೀಗೆ ಅದ್ವೈತವು ಪ್ರಪಂಚವನ್ನು ಮಿಥ್ಯೆಯೆಂದು ಹೇಳಿದರೂ ಪರಮಾರ್ಥದಲ್ಲಿ ಸತ್ಯವಾದ ಬ್ರಹ್ಮವನ್ನು ಒಪ್ಪಿದೆ. ಬೌದ್ಧರಾದರೋ ಪರಮಾರ್ಥದಲ್ಲಿಯೂ ಪ್ರಪಂಚವು ಅಸತ್ ಎಂದೂ ಶೂನ್ಯವೆಂದೂ ಹೇಳುತ್ತಾರೆ. ಆದ್ದರಿಂದ ಅದ್ವೈತ ದರ್ಶನವು ಬೌದ್ಧಮತಕ್ಕೆ ಸಂಪೂರ್ಣ ವಿರೋಧಿಯಾದದ್ದು.

ಪ್ರಪಂಚವು 'ತತ್ತ್ವಾನ್ಯತ್ವಾಭ್ಯಾಂ ದುರ್ನಿರೂಪಂ' ಎಂದು ಶ್ರೀಶಂಕರಾಚಾರ್ಯರು ಹೇಳಿದ್ದಾರೆ. ಇದು ಅನಿರ್ವಚನೀಯದ ಇನ್ನೊಂದು ಲಕ್ಷಣ. ಚಿನ್ನವು ಒಡವೆಯಾಗುತ್ತದೆ, ಮಣ್ಣು ಮಡಕೆಯಾಗುತ್ತದೆ. ಚಿನ್ನ ಮತ್ತು ಮಣ್ಣು ಕಾರಣ ಒಡವೆ ಮತ್ತು ಮಡಕೆ ಕಾರ್ಯ. ಇಲ್ಲಿ ಕಾರ್ಯವು ಕಾರಣದಿಂದ ಭಿನ್ನವೆ? ಅಭಿನ್ನವೆ? ಭಿನ್ನವಾದರೆ ಚಿನ್ನವನ್ನೂ ಒಡವೆಯನ್ನೂ ಬೇರೆ ಬೇರೆ ತೋರಿಸಬೇಕಾಗುತ್ತದೆ. ಅಭಿನ್ನವಾದರೆ ಒಡವೆಯ ಕೆಲಸ ಚಿನ್ನದ ಗಟ್ಟಿಯಿಂದಲೂ ಆಗಬೇಕಾಗುತ್ತದೆ. ಚಿನ್ನದ ಗಟ್ಟಿಯನ್ನೇ ಉಂಗುರವೆಂದೂ ಬಳೆಯೆಂದೂ ತಿಳಿದು ಜನರು ಬಳಸಲಿ

ಎಂಬ ಪ್ರಶ್ನೆ ಏಳುತ್ತದೆ. ಆದ್ದರಿಂದ ಇಲ್ಲಿ ಭೇದವನ್ನಾಗಲಿ ಅಭೇದವನ್ನಾಗಲಿ ವ್ಯವಸ್ಥಾಪಿಸುವುದು ಶಕ್ಯವಲ್ಲ. ಇದು ದುರ್ನಿರೂಪ; ಅನಿರ್ವಚನೀಯ.

**ಅಧ್ಯಾರೋಪ–ಅಪವಾದ:** 'ಯತೋ ವಾಚೋ ನಿವರ್ತಂತೇ' ಎಂದು ಯಾವ ಬ್ರಹ್ಮವಸ್ತುವನ್ನು ವರ್ಣಿಸಲು ಸಾಧ್ಯವಿಲ್ಲವೆಂದು ಉಪನಿಷತ್ತು ಹೇಳಿದೆಯೋ ಅದನ್ನೆ ಶ್ರುತಿಸ್ಮೃತಿಗಳು ಸೃಷ್ಟಿಕರ್ತ ಇತ್ಯಾದಿಯಾಗಿ ವರ್ಣಿಸಿವೆ. ನಿರ್ಧರ್ಮಕವಾದ ಬ್ರಹ್ಮವನ್ನು ಪರಿಚಯಮಾಡಿಕೊಡುವುದಕ್ಕೆ ಸಾಧ್ಯವಿಲ್ಲವೆಂದೂ ಅದನ್ನು ನಿಷೇಧಮುಖದಿಂದಲೇ ತಿಳಿಯಬೇಕೆಂದೂ 'ಅಥಾತ ಆದೇಶೋ ನೇತಿನೇತಿ' ಇತ್ಯಾದಿ ಶ್ರುತಿಗಳು ಪ್ರವೃತ್ತವಾಗಿವೆ. ಆದರೂ ಕೆಲವು ಧರ್ಮಗಳನ್ನು ಬ್ರಹ್ಮದಲ್ಲಿ ಹೇಳಿಯೂ ಇವೆ. ಇವುಗಳ ಸಮನ್ವಯಕ್ಕಾಗಿ ಅಧ್ಯಾರೋಪವಾದ ನ್ಯಾಯವನ್ನು ವೇದಾಂತದಲ್ಲಿ ಬಳಸಿಕೊಂಡಿದೆ.

ಅಧ್ಯಾರೋಪವೆಂದರೆ ಅದರಲ್ಲಿಲ್ಲದ ಧರ್ಮವನ್ನು ಅದರಲ್ಲಿ ಆರೋಪಿಸುವುದು. ಅನಂತರ ಆ ಧರ್ಮವನ್ನು ಅಲ್ಲಗಳೆಯುವುದು ಅಪವಾದ. ಈ ಪ್ರಕ್ರಿಯೆಯಿಂದ ವಾಕ್ಕಿಗೆ ಅಗೋಚರವಾದ ಬ್ರಹ್ಮವಸ್ತುವನ್ನು ಪ್ರಕರಾಂತರವಾಗಿ ವಾಕ್ಕಿನಿಂದ ಪರಿಚಯಮಾಡಿಕೊಡಲು ಸಾಧ್ಯ.

'ಅಧ್ಯಾರೋಪಾಪವಾದಾಭ್ಯಾಂ ನಿಷ್ಪ್ರಪಂಚಂ ಪ್ರಪಂಚ್ಯತೇ' ಎಂದು ಸಂಪ್ರದಾಯವಿದರ ಪ್ರಾಚೀನವಚನ, 'ನಿಷ್ಪ್ರಪಂಚವಾದ ಆತ್ಮತತ್ತ್ವವನ್ನು ಅಧ್ಯಾರೋಪಾಪವಾದಗಳಿಂದ ವಿವರಿಸಲಾಗುತ್ತದೆ'. ಉದಾಹರಣೆಗೆ.

'ಸರ್ವಕರ್ಮಾ ಸರ್ವಕಾಮಃ ಸರ್ವಗಂಧಃ ಸರ್ವರಸಃ" 'ಚತುಷ್ಪಾತ್' 'ಸರ್ವತಃಪಾಣಿಪಾದಂ' 'ಯಃ ಸರ್ವಜ್ಞಃ ಸಃ ಸರ್ವವಿತ್"—ಇತ್ಯಾದಿ ಶ್ರುತಿಗಳಲ್ಲಿ ಆತ್ಮನು ಸವಿಶೇಷನೆಂದೂ ರೂಪಯುಕ್ತನೆಂದೂ ಹೇಳಲಾಗಿದೆ. ಈ ವಿಶೇಷಗಳೆಲ್ಲವೂ ಔಪಾಧಿಕಗಳು. ಇವೆಲ್ಲವೂ ಉಪಾಸನಾರ್ಥವಾಗಿಯೂ ಆತ್ಮನು ಇದ್ದಾನೆಂದೂ ತಿಳಿಸಿಕೊಡುವುದಕ್ಕಾಗಿಯೂ ಹೊರಟಿರುವ ಶ್ರುತಿಗಳು, ಸರ್ವಕರ್ಮತ್ವಾದಿಧರ್ಮಗಳು ಅಧ್ಯಾರೋಪಿತವಾಗಿವೆ. "ಅಶಬ್ದಮಸ್ಪರ್ಶಮರೂಪಮವ್ಯಯಂ" ಸತ್ಯಂ ಜ್ಞಾನಮನಂತಂ ಬ್ರಹ್ಮ' 'ನಸತ್ ತನ್ನಾಸದುಚ್ಯತೇ' 'ಸರ್ವೇಂದ್ರಿಯವಿವರ್ಜಿತಂ' ಮುಂತಾದ ವಾಕ್ಯಗಳಿಂದ ಆತ್ಮನು ನಿರ್ವಿಶೇಷನೆಂದು ಹೇಳಿ ಅವನಲ್ಲಿ ಸಕಲವಿಶೇಷವನ್ನು ಅಪವಾದದಿಂದ ನಿಷೇಧಿಸಿದೆ. 'ಆತ್ಮಾವಾ ಅರೇ ಶ್ರೋತವ್ಯಃ' ಎಂದು ಆತ್ಮನಿಗೆ ಜ್ಞೇಯತ್ವವನ್ನು ಹೇಳಿ, 'ಅನ್ಯದೇವ ತದ್ವಿದಿತಾತ್—' ಎಂದು ಆತನು ಅಜ್ಞೇಯನೆಂದು ತಿಳಿಸಿದೆ. ಆತ್ಮನು ಜ್ಞಾನಕ್ಕೆ ವಿಷಯನೇ ಅಲ್ಲ; ಆತನು ಸದಾ ವಿಷಯಿ ಎಂದು ತಿಳಿಸಿಕೊಡುವುದೂ ಅಧ್ಯಾತ್ಮಜ್ಞಾನಕ್ಕಾಗಿ ಯತ್ನಿಸಬೇಕೆಂಬುದೂ



ಶ್ರುತಿಯ ತಾತ್ಪರ್ಯ. ಈ ಪ್ರಕ್ರಿಯೆಯಿಂದ ಬ್ರಹ್ಮದಲ್ಲಿ ಆರೋಪಿತ ಧರ್ಮಗಳನ್ನು ಅಲ್ಲಗಳೆದು ಬ್ರಹ್ಮಸ್ವರೂಪದ ಯಥಾರ್ಥತೆಯನ್ನು ಗೊತ್ತುಪಡಿಸಲಾಗುತ್ತದೆ.

**ಮಾಯೆ:** ಅದ್ವೈತದರ್ಶನದಲ್ಲಿ ಮಾಯೆಯ ಸ್ಥಾನ ದೊಡ್ಡದು. ಜಗತ್ತಿನ ಸೃಷ್ಟಿಯಿಂದ ಹಿಡಿದು ಸಕಲವ್ಯವಹಾರಗಳ ಉಪಪತ್ತಿಯನ್ನು ಮಾಯೆಯ ನೆರವಿನಿಂದ ನಿರೂಪಿಸಬೇಕಾಗಿದೆ. 'ಮಾಯಾಂತು ಪ್ರಕೃತಿಂ ವಿದ್ಯಾತ್ ಮಾಯಿನಂತು ಮಹೇಶ್ವರಂ' ಇತ್ಯಾದಿ ಶ್ರುತಿಗಳೂ 'ಮಮ ಮಾಯಾ ದುರತ್ಯಯಾ' ಇತ್ಯಾದಿ ಗೀತಾವಚನಗಳೂ ಮಾಯೆಯ ಅಸ್ತಿತ್ವವನ್ನು ಘೋಷಿಸಿವೆ. ಇದಕ್ಕೆ ಅವ್ಯಕ್ತ, ಪ್ರಕೃತಿ, ಅವಿದ್ಯೆ ಎಂದೂ ಹೆಸರಿದೆ. ಇದೊಂದು ಪರಮೇಶ್ವರನ ಶಕ್ತಿ. ತ್ರಿಗುಣಾತ್ಮಕ; ಅನಾದಿ. ಪ್ರತಿಯೊಬ್ಬ ಜೀವಿಯೂ ಇದರ ಬಂಧನದಲ್ಲಿ ಸಿಕ್ಕಿದ್ದಾನೆ. 'ಭೂಯಶ್ಚಾಂತೇ ವಿಶ್ವಮಾಯಾನಿವೃತ್ತಿಃ ತರತ್ಯವಿದ್ಯಾಂ ವಿತತಾಂ—' ಇತ್ಯಾದಿ ಪ್ರಮಾಣಗಳಿಂದ ಜ್ಞಾನಿಗೆ ಇದರ ಬಂಧನದಿಂದ ನಿವೃತ್ತಿಯುಂಟು. ಇದು ಸತ್ ಅಲ್ಲ, ಜ್ಞಾನದಿಂದ ಬಾಧಿತವಾಗುವುದರಿಂದ. ಅಸತ್ ಅಲ್ಲ, ಜ್ಞಾನಕ್ಕೆ ಮೊದಲು ಗೋಚರವಾಗುವುದರಿಂದ. ಹಾಗೆಯೇ ಇದು ಬ್ರಹ್ಮಕ್ಕಿಂತ ಭಿನ್ನವಲ್ಲ, ಭಿನ್ನವಾದರೆ ಬ್ರಹ್ಮವು ಅದ್ವಿತೀಯವಾಗಲಾರದು. ಅಭಿನ್ನವೂ ಅಲ್ಲ, ಜ್ಞಾನದಿಂದ ಬಾಧಿತವಾಗಿರುವುದರಿಂದ, ಬ್ರಹ್ಮವು ಬಾಧಿತವಲ್ಲ. ಆದ್ದರಿಂದ ಇದು ಅನಿರ್ವಚನೀಯವಾದ ಪರಮೇಶ್ವರನ ಒಂದು ಶಕ್ತಿ. ಇದಕ್ಕೆ ಆವರಣ, ವಿಕ್ಷೇಪ ಎಂಬ ಎರಡು ಸ್ವಭಾವಗಳುಂಟು. ರಜ್ಜುಸರ್ಪಸ್ಥಳದಲ್ಲಿ ರಜ್ಜುವಿನ ಸ್ವರೂಪವನ್ನು ಮರೆಮಾಡುವುದು ಆವರಣ. ಸರ್ಪವಾಗಿ ತೋರಿಸುವುದು ವಿಕ್ಷೇಪ. ಈ ಮಾಯೆ ಬ್ರಹ್ಮಸ್ವರೂಪವನ್ನು ಮರೆಮಾಡಿ ಪ್ರಪಂಚರೂಪವನ್ನು ತೋರಿಸುತ್ತದೆ.

**ಪಂಚಕೋಶಪ್ರಕ್ರಿಯೆ:** ತೈತ್ತಿರೀಯೋಪನಿಷತ್ತಿನ ಆನಂದವಲ್ಲಿಯಲ್ಲಿ ಈ ಪ್ರಕ್ರಿಯೆಯಿಂದ ಆತ್ಮಸ್ವರೂಪವನ್ನು ತಿಳಿಸಿಕೊಟ್ಟಿದೆ. ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ ಎಂಬ ಪಂಚಕೋಶಗಳನ್ನಿಲ್ಲಿ ಹೇಳಿದೆ. ಸ್ಥೂಲ ಶರೀರವು ಅನ್ನಮಯ ಕೋಶ. ಪಂಚಪ್ರಾಣಗಳೂ ಕರ್ಮೇಂದ್ರಿಯಗಳೂ ಸೇರಿ ಪ್ರಾಣಮಯಕೋಶ ಮನಸ್ಸು ಜ್ಞಾನೇಂದ್ರಿಯಗಳು ಸೇರಿ ಮನೋಮಯಕೋಶ ಬುದ್ಧಿ, ಜ್ಞಾನೇಂದ್ರಿಯಗಳು ಸೇರಿ ವಿಜ್ಞಾನಮಯಕೋಶ ಅವಿದ್ಯಾಸಹಿತನಾದ ಆತ್ಮ ಆನಂದಮಯಕೋಶ. ಸ್ಥೂಲದೃಷ್ಟಿಯಿಂದ ಕಂಡದ್ದನ್ನು ಸೂಕ್ಷ್ಮದೃಷ್ಟಿಯಿಂದ ವಿಚಾರ ಮಾಡುತ್ತ ಆತ್ಮಸ್ವರೂಪವನ್ನು ತಿಳಿಸಿಕೊಡುವುದು ಈ ಪ್ರಕ್ರಿಯೆಯ ಉದ್ದೇಶ. ಮೊದಲು ಅನ್ನಮಯವಾದ ದೇಹವನ್ನು ಆತ್ಮವೆಂದು ಹೇಳಿ, ಅನಂತರ ಪ್ರಾಣ, ಮನಸ್ಸು, ಬುದ್ಧಿಗಳನ್ನು ಕ್ರಮವಾಗಿ ಆತ್ಮವೆಂದು ತೋರಿಸುತ್ತ ಆನಂದಮಯನಾದ ಜೀವನನ್ನು ಆತ್ಮನೆಂದು ಹೇಳಿ, ತರುವಾಯ ಅದಕ್ಕೂ ಮುಂದೆ

ಹೋಗಿ ಆನಂದವೇ ಆತ್ಮಸ್ವರೂಪವೆಂದು ಈ ಉಪನಿಷತ್ತಿನಲ್ಲಿ ತಿಳಿಸಿಕೊಟ್ಟಿದೆ. ಸ್ಥೂಲಾರುಂಧತೀ ನ್ಯಾಯಕ್ಕೆ ಇದು ಸಮವಾದುದು. ಅರುಂಧತೀನಕ್ಷತ್ರ ಅತ್ಯಂತ ಚಿಕ್ಕದು. ಒಮ್ಮೆಗೇ ಅದನ್ನು ಗುರುತಿಸಲಾಗುವುದಿಲ್ಲ. ಆದ್ದರಿಂದ ದೊಡ್ಡದಾಗಿ ಮಿರುಗುವ ನಕ್ಷತ್ರವನ್ನು ತೋರಿಸಿ, ಆಮೇಲೆ ಅದರ ಪಕ್ಕದಲ್ಲಿರುವುದನ್ನು ಪರಿಚಯ ಮಾಡಿಸಿ, ಕಡೆಯಲ್ಲಿ ಅತಿ ಸೂಕ್ಷ್ಮವಾಗಿರುವ ಅರುಂಧತೀ ನಕ್ಷತ್ರವನ್ನು ತೋರಿಸುತ್ತಾರೆ. ಅದೇ ರೀತಿಯಿಂದ ಇಲ್ಲಿ ನಿರ್ವಿಶೇಷವಾದ ಬ್ರಹ್ಮವನ್ನು ಗುರುತಿಸಿಕೊಟ್ಟಿದೆ.

**ಅವಸ್ಥಾತ್ರಯ ಪರೀಕ್ಷೆ:** ಪ್ರತಿಯೊಬ್ಬನಿಗೂ ಜಾಗ್ರತ್, ಸ್ವಪ್ನ, ಸುಷುಪ್ತಿ-ಎಂಬ ಮೂರು ಅವಸ್ಥೆಗಳು ಅನುಭವಗೋಚರವಾಗಿವೆ. ಲೋಕದಲ್ಲಿ ಜಾಗ್ರತ್ತಿನ ಅನುಭವದ ಆಧಾರದಿಂದಲೇ ವಸ್ತುನಿರ್ಣಯವನ್ನು ಮಾಡುತ್ತಿದ್ದಾರೆ. ಜಾಗ್ರತ್ತಿನಲ್ಲಿ ಆಗುವ ಅನುಭವಕ್ಕಿಂತ ಸ್ವಪ್ನದ ಅನುಭವ ಬೇರೆಯಾಗಿರುತ್ತದೆ. ಜಾಗ್ರತ್ತಿನ ದೃಷ್ಟಿಯಿಂದ ಸ್ವಪ್ನ ಸುಳ್ಳು; ಸ್ವಪ್ನದ ದೃಷ್ಟಿಯಿಂದ ಜಾಗ್ರತ್ ಸುಳ್ಳು. ಸುಷುಪ್ತಿಯಲ್ಲಿ (ಗಾಢನಿದ್ರೆಯಲ್ಲಿ) ಜಾಗ್ರತ್, ಸ್ವಪ್ನಗಳೆರಡೂ ಸುಳ್ಳಾಗಿ ಪರಿಣಮಿಸುತ್ತವೆ. ಸುಷುಪ್ತಿಯಲ್ಲಿ ಆನಂದಮಾತ್ರವಿರುತ್ತದೆ. ಹೀಗೆ ಮೂರು ಅವಸ್ಥೆಗಳಲ್ಲಿ ಮೂರುಬಗೆಯ ಅನುಭವಗಳಿರುವಾಗ ಜಾಗ್ರತ್ತಿಗೆ ಮಾತ್ರ ಹೆಚ್ಚಿನ ಬೆಲೆಯನ್ನು ಕೊಡುವುದು ಸರಿಯಲ್ಲ. ತತ್ತ್ವನಿರ್ಣಯ ಮಾಡುವಾಗ ಈ ಮೂರು ಅವಸ್ಥೆಗಳನ್ನೂ ಪರೀಕ್ಷಿಸಬೇಕು. ಅವಸ್ಥಾತ್ರಯಕ್ಕೂ ತತ್ತ್ವನಿರ್ಣಯದಲ್ಲಿ ಸಮಾನವಾದ ಬೆಲೆಯನ್ನು ಕೊಟ್ಟಿರುವುದು ಅದ್ವೈತಸಿದ್ಧಾಂತದ ಒಂದು ವಿಶೇಷ. ಜೀವಾತ್ಮರಿಗೆ ಒದಗುವ ಈ ಮೂರು ಅವಸ್ಥೆಗಳು ಆಕಸ್ಮಿಕಗಳಲ್ಲವೆಂದೂ ಆತ್ಮಸ್ವರೂಪವನ್ನು ನಿರ್ಣಯಿಸಿಕೊಳ್ಳಲು ಇವು ದೇವದತ್ತವಾದ ವರಗಳೆಂದೂ ಹೇಳಬೇಕಾಗಿದೆ.

ಮಾಯಾಕಲ್ಪಿತಗಳಾದ ಇಂದ್ರಿಯ ಮನಸ್ಸುಗಳಿಂದ ಜಾಗ್ರದವಸ್ಥೆಯಲ್ಲಿ ಆತ್ಮನು ನಾನಾವಿಷಯಗಳನ್ನು ಭೋಗಿಸುತ್ತಾನೆ. ಈ ಸ್ಥಿತಿಯಲ್ಲಿ ಆತ್ಮನಿಗೆ ವೈಶ್ವಾನರನೆಂದು ಹೆಸರು. ಸ್ವಪ್ನಾವಸ್ಥೆಯಲ್ಲಿ ಅವಿದ್ಯಾಕಾಮಕರ್ಮಗಳಿಂದ ಪ್ರೇರಿತನಾಗಿ ಬಾಹ್ಯಸಂಸ್ಕಾರವಶದಿಂದ ಮನಸ್ಸಿನಿಂದ ಮಾತ್ರ ವಿಷಯವನ್ನನುಭವಿಸುತ್ತಾನೆ. ಇವನಿಗೆ ತೈಜಸ ಎಂದು ಹೆಸರು. ಸುಷುಪ್ತಿಯಲ್ಲಾದರೋ ಮಾನಸಸ್ಪಂದವೂ ಇಲ್ಲದ್ದರಿಂದ ಆತ್ಮನು ಯಾವ ದ್ವೈತಜಾಲವನ್ನೂ ಕಾಣದೆ ಸ್ವಸ್ವರೂಪವಾದ ಆನಂದದಲ್ಲಿ ಮುಳುಗಿರುತ್ತಾನೆ. ಇವನು ಆನಂದಭುಕ್, ಈತನಿಗೆ ಪ್ರಾಜ್ಞನೆಂದು ಹೆಸರು. ಈತನು 'ಸ್ವಮಪೀತೋಭವತಿ=ಸ್ವಸ್ವರೂಪವಾದ ಬ್ರಹ್ಮದಲ್ಲಿ ಲೀನನಾಗುತ್ತಾನೆ' (ಛಾಂ. ೬-೮-೧) ಇದಕ್ಕೆ ಸತ್ಯಂಪತ್ತಿ ಎಂದು ಹೆಸರು.

ಈ ಪ್ರಜ್ಞಾನ ಸ್ವರೂಪವನ್ನರಿತಾಗ ನಾವು ಆತ್ಮನ ನಿಜಸ್ವರೂಪದ ಹತ್ತಿರಕ್ಕೆ ಬಂದಂತಾಗುತ್ತದೆ. ಸಕಲದುಃಖ ನಿವೃತ್ತಿಯೂ ವಿಷಯಭೋಗವಿಲ್ಲದೆಯೇ ದೊರ



ಕುವ ಕೇವಲಾನಂದದ ಸ್ಥಿತಿಯೂ ಇಲ್ಲಿ ಗೊತ್ತಾಗುತ್ತದೆ. ಆದರೆ ಪ್ರಾಜ್ಞನಿಗೆ ಅವಿದ್ಯಾಬೀಜ ಇರುತ್ತದೆ. ಆದ್ದರಿಂದ ಮತ್ತೆ ಜಾಗ್ರತ್ತಿಗೆ ಬಂದು ಸಂಸಾರಿಯಾಗುತ್ತಾನೆ. ಜಾಗ್ರತ್‌ಸ್ವಪ್ನಗಳಲ್ಲಿ ತತ್ತ್ವದ ಅನ್ಯಥಾ ಗ್ರಹಣವಿದೆ. ಸುಷುಪ್ತಿಯಲ್ಲಿ ಅನ್ಯಥಾ ಗ್ರಹಣವಿಲ್ಲದಿದ್ದರೂ ತತ್ತ್ವದ ಅಗ್ರಹಣ-ಅಜ್ಞಾನ ಇದೆ. ಆದ್ದರಿಂದ ಈ ಮೂರು ಅವಸ್ಥೆಗಳನ್ನೂ ದಾಟಿದ ನಾಲ್ಕನೆಯ ಸ್ಥಿತಿ ಆತ್ಮನದು. 'ಶಾಂತಂ ಶಿವಮದ್ವೈತಂ ಚತುರ್ಥಂ ಮನ್ಯಂತೇ, ಸ ಆತ್ಮಾ, ಸ ವಿಜ್ಞೇಯಃ (ಮಾಂ. ೧-೭) ಎನ್ನುತ್ತದೆ ಉಪನಿಷತ್ತು. (ಇದರ ಹೆಚ್ಚಿನ ವಿವರಣೆಗೆ ಮಾಂಡೂಕ್ಯೋಪನಿಷತ್ತಿನ ಶಾಂಕರ ಭಾಷ್ಯವನ್ನೂ, ಗೌಡಪಾದರ ಮಾಂಡೂಕ್ಯಕಾರಿಕೆಗಳನ್ನೂ ವಿದ್ಯಾರಣ್ಯರ ಪಂಚದಶಿಯನ್ನೂ ನೋಡಬಹುದು).

**ವಾಕ್ಯಾರ್ಥವಿಚಾರ:** ೧. ಲಕ್ಷಣ: ಶ್ರುತಿಗಳಲ್ಲಿ ಬ್ರಹ್ಮದ ಲಕ್ಷಣವನ್ನು ನಿರೂಪಿಸಿರುತ್ತದೆ. ಲಕ್ಷಣವೆಂದರೆ ವಸ್ತುವನ್ನು ಗುರುತಿಸುವ ಅಸಾಧಾರಣ ಧರ್ಮ. ಇದು ಸ್ವರೂಪಲಕ್ಷಣ, ತಟಸ್ಥಲಕ್ಷಣ ಎಂದು ಎರಡು ವಿಧ. 'ಸತ್ಯ ಜ್ಞಾನಮನಂತಂ ಬ್ರಹ್ಮ, ವಿಜ್ಞಾನಮಾನಂದಂ ಬ್ರಹ್ಮ' ಮೊದಲಾದವು ಸ್ವರೂಪಲಕ್ಷಣಗಳು. ಬ್ರಹ್ಮವು ಸತ್ಯವೂ ಜ್ಞಾನಸ್ವರೂಪವೂ ಅನಂತವೂ ಆನಂದ ಸ್ವರೂಪವೂ ಎಂದು ಬ್ರಹ್ಮದ ಸ್ವರೂಪವನ್ನು ಇಲ್ಲಿ ಹೇಳಿದೆ. ಕೆಲವು ಸ್ಥಳದಲ್ಲಿ ಇನ್ನೊಂದು ಬಗೆಯಲ್ಲಿ ವಸ್ತುವನ್ನು ಗುರುತಿಸಲಾಗುತ್ತದೆ. 'ಕಾಗೆ ಕುಳಿತಿರುವುದು ದೇವದತ್ತನ ಮನೆ' ಎಂದು ಉದಾಹರಣೆ. ಇಲ್ಲಿ ಕಾಗೆ ಹಾರಿಹೋದರೂ ಅದು ದೇವದತ್ತನ ಮನೆಯೇ ಆಗಿರುತ್ತದೆ. ಆದ್ದರಿಂದ ಕಾಗೆಯೆಂಬುದು ದೇವದತ್ತನ ಗೃಹಕ್ಕೆ ಪರಿಚಾಯಕವಾದರೂ ಕಾಗೆ ಅಲ್ಲಿ ಇರಲೇಬೇಕಾಗಿಲ್ಲ. ಇದು ತಟಸ್ಥ ಲಕ್ಷಣ. 'ಯತೋವಾ ಇಮಾನಿ ಭೂತಾನಿ ಜಾಯಂತೇ' ಎಂದು ಪ್ರಾಣಿಗಳ ಕಾರಣತ್ವವನ್ನು ಬ್ರಹ್ಮದಲ್ಲಿ ಹೇಳಿದೆ. ಸಿದ್ಧಾಂತದಲ್ಲಿ ಕಾರಣತ್ವವೆಂಬ ಧರ್ಮವನ್ನು ಬ್ರಹ್ಮದಲ್ಲಿ ಒಪ್ಪುವುದಿಲ್ಲ. ಆದ್ದರಿಂದ ಇದು ಪರಿಚಾಯಕವಾದ ತಟಸ್ಥಲಕ್ಷಣ.

೨. ಲಕ್ಷಣಾ: ಶಬ್ದಕ್ಕೆ ಅರ್ಥವನ್ನು ಬೋಧಿಸುವ ಸಾಮರ್ಥ್ಯವಿದೆಯಷ್ಟೆ. ಇದು ಅಭಿಧಾ, ಲಕ್ಷಣಾ ಎಂದು ಎರಡು ವಿಧ. ಲೋಕಪ್ರಸಿದ್ಧವಾದ ಅರ್ಥವನ್ನು ಬೋಧಿಸುವ ಶಕ್ತಿಗೆ ಅಭಿಧಾ ಎಂದು ಹೆಸರು. 'ಗೋವು ಹುಲ್ಲನ್ನು ಮೇಯುತ್ತದೆ. ಟೋಪಿಯನ್ನು ಧರಿಸಿದವನು ಹೋಗುತ್ತಿದ್ದಾನೆ' ಮುಂತಾದವು ಇದಕ್ಕೆ ಉದಾಹರಣೆಗಳು. ಆದರೆ ಟೋಪಿ ಹೋಗುತ್ತಿದೆ ಎಂದು ಹೇಳಿದಾಗ ಟೋಪಿಯನ್ನು ಧರಿಸಿದವನು ಎಂಬ ಅರ್ಥಮಾಡಬೇಕಾಗುತ್ತದೆ. ಇಲ್ಲಿ ಟೋಪಿಗೆ ಅದನ್ನು ಧರಿಸಿದವನು ಎಂಬ ಅರ್ಥ ಲಕ್ಷಣೆಯಿಂದ ಬರುತ್ತದೆ. ಲಕ್ಷಣೆಯ ಅನೇಕ ಪ್ರಕಾರಗಳಲ್ಲಿ 'ಜಹದಜಹಲ್ಲಕ್ಷಣಾ' ಎಂಬುದೊಂದು. ಜಹತ್=ಬಿಡುವುದು, ಅಜಹತ್=ಬಿಡದಿರುವುದು.

ಕೆಲವುಸಂದರ್ಭದಲ್ಲಿ ವಾಚ್ಯಾರ್ಥದ ಒಂದಂಶವನ್ನು ಬಿಟ್ಟು ಇನ್ನೊಂದಂಶವನ್ನು ಬಿಡದೇ ಇರಬೇಕಾಗುತ್ತದೆ. ಇಲ್ಲಿ ಜಹದಜಹಲ್ಲಕ್ಷಣಾ ಪ್ರವೃತ್ತನಾಗುವುದು. ಕಾಶಿಯಲ್ಲಿ ಎಂದೋ ಕಂಡಿರುವ ದೇವದತ್ತನನ್ನು ಬೆಂಗಳೂರಲ್ಲಿ ನೋಡಿದಾಗ 'ಸೋಽಯಂ ದೇವದತ್ತಃ–ಅವನೇ ಈ ದೇವದತ್ತ' ಎಂಬ ಪ್ರತ್ಯಭಿಜ್ಞೆ ಉಂಟಾಗುತ್ತದೆ. ಸಃ ಎಂದರೆ ಇನ್ನೊಂದು ದೇಶ ಕಾಲಾವಸ್ಥೆಗೆ ಒಳಗಾದವನು. ಅಯಂ ಎಂದರೆ ಈಗಿನ ದೇಶ ಕಾಲಾವಸ್ಥೆಗೆ ಒಳಗಾದವನು. ಇವರಿಬ್ಬರೂ ಒಬ್ಬನೇ ಎನ್ನುವುದು ವಿರುದ್ಧವಾಗುತ್ತದೆ. ಆದ್ದರಿಂದ ಕಾಶಿಯ ಮತ್ತು ಬೆಂಗಳೂರಿನ ದೇಶಕಾಲಾವಸ್ಥೆಗಳನ್ನು ಬಿಟ್ಟು ವ್ಯಕ್ತಿಯನ್ನು ಮಾತ್ರ ಗ್ರಹಿಸಿ ಒಬ್ಬನೇ ಎಂದು ಸಮನ್ವಯಿಸಿಕೊಳ್ಳಬೇಕಾಗುತ್ತದೆ.

ಇದಕ್ಕೆ 'ತತ್ತ್ವಮಸಿ' ಎಂಬ ಮಹಾವಾಕ್ಯ ಉದಾಹರಣೆ. ಆರುಣಿ ಎಂಬವನು ತನ್ನ ಮಗನಾದ ಶ್ವೇತಕೇತುವಿಗೆ ಬ್ರಹ್ಮೋಪದೇಶವನ್ನು ಮಾಡುವಾಗ ಈ ವಾಕ್ಯ ಬಂದಿದೆ. ತತ್ ಎಂದರೆ ಪ್ರಕೃತಾನುರೋಧವಾಗಿ ಸರ್ವಶಕ್ತರೂ ಸರ್ವಜ್ಞನೂ ಆದ ಆತ್ಮನೆಂದರ್ಥ. ತ್ವಂ ಎಂದರೆ ಅಲ್ಪಶಕ್ತನೂ ಅಲ್ಪಜ್ಞನೂ ಜೀವಾತ್ಮನೂ ಆದ ನೀನು ಎಂದರ್ಥ. ವಿರುದ್ಧವಿಶೇಷಣಗಳು ಇರುವುದರಿಂದ ಐಕ್ಯವನ್ನು ಹೇಳುವುದು ಹೇಗೆ? ಆದ್ದರಿಂದ ವಿಶೇಷಣಗಳನ್ನು ಬಿಟ್ಟು ವಿಶೇಷ್ಯವಾದ ಶುದ್ಧಚೈತನ್ಯವನ್ನು ಮಾತ್ರ ಗ್ರಹಿಸಿ ಐಕ್ಯವನ್ನು ಹೇಳಬೇಕು. ಇಲ್ಲಿ ಜಹದಜಹಲ್ಲಕ್ಷಣಾ ಪ್ರವೃತ್ತವಾಗುತ್ತವೆ.

**ಬಂಧ-ಮೋಕ್ಷವ್ಯವಹಾರ:** ಜೀವನು ಯಾವಾಗಲೂ ಈಶ್ವರಸ್ವರೂಪನೇ ಆಗಿದ್ದರೆ ಬಂಧಮೋಕ್ಷಗಳೆಂಬುದು ಹೇಗೆ? ಯಾರಿಗೆ ಬಂಧ? ಯಾರಿಗೆ ಮೋಕ್ಷ? ಅವಿದ್ಯೆಯಿಂದ ಜೀವನು ಬದ್ಧನಾಗಿದ್ದೇನೆಂದು ತಿಳಿದುಕೊಂಡಿದ್ದಾನೆ. ದೇಹೇಂದ್ರಿಯಗಳಲ್ಲಿ ಆತ್ಮಬುದ್ಧಿಯುಂಟಾಗಿ ಸುಖದುಃಖಗಳನ್ನು ಅಂತಃಕರಣದಿಂದ ಅನುಭವಿಸುತ್ತಾನೆ. ನಾನು ಸಂಸಾರಿ ಎಂದು ತಿಳಿದಿರುವುದೇ ಬಂಧ. ಈ ಅಜ್ಞಾನದ ನಿವೃತ್ತಿಯೇ ಮೋಕ್ಷ. ಮೋಕ್ಷವೆಂದರೆ ಲೋಕಾಂತರದಲ್ಲಿ ದೊರಕತಕ್ಕ ವಸ್ತುವಲ್ಲ. ಕರ್ಮದಿಂದ ಅದನ್ನು ಉತ್ಪಾದಿಸತಕ್ಕದ್ದಲ್ಲ. ಅದು ಸಂಸ್ಕಾರವೂ ಅಲ್ಲ, ವಿಕಾರ್ಯವೂ ಅಲ್ಲ. ಅಜ್ಞಾನಗ್ರಂಥಿಯ ಭೇದನವಾಗಿ ಆತ್ಮನು ಸ್ವಸ್ವರೂಪದಲ್ಲಿ ನಿಲ್ಲುವುದೇ ಮೋಕ್ಷ.

> ಅನಾದಿಮಾಯಯಾ ಸುಪ್ತೋಯದಾ ಜೀವಃ ಪ್ರಬುಧ್ಯತೇ ।
> ಅಜಮನಿದ್ರಮಸ್ವಪ್ನಮದ್ವೈತಂ ಬುಧ್ಯತೇ ತದಾ ॥ (ಗೌ. ಮಾಂ ಕಾರಿಕಾ ೧-೧೬)

'ಅನಾದಿಯಾದ ಮಾಯೆಯಿಂದ ನಿದ್ರಿಸುತ್ತಿರುವ ಜೀವನು ಯಾವಾಗ (ಗುರೂಪದೇಶದಿಂದ) ಎಚ್ಚರಗೊಳ್ಳುವನೋ ಆಗ ತಾನು ಜನ್ಮಾದಿವಿಕಾರವಿಲ್ಲದವನೆಂದೂ ನಿದ್ರೆಯೆಂಬ ಮಾಯಾಬಂಧದಿಂದ ರಹಿತನೆಂದೂ ಆದ್ದರಿಂದ ಅನ್ಯಥಾಗ್ರಹಣರೂಪವಾದ ಸ್ವಪ್ನವಿಲ್ಲದವನೆಂದೂ ಅದ್ವಿತೀಯನಾದ ಆತ್ಮನೆಂದೂ ತಿಳಿದುಕೊಳ್ಳುತ್ತಾನೆ.'



'ಬ್ರಹ್ಮ ವೇದ ಬ್ರಹ್ಮೈವ ಭವತಿ' (ಮುಂ. ೩-೨-೯)–'ಬ್ರಹ್ಮವನ್ನರಿತವನು ಬ್ರಹ್ಮವೇ ಆಗುವನು' ಮುಂತಾದ ಶ್ರುತಿವಾಕ್ಯಗಳಿಂದ ಬ್ರಹ್ಮಭಾವದಲ್ಲಿ ಅವಸ್ಥಿತಿಯೇ ಮೋಕ್ಷವೆಂದು ಗೊತ್ತಾಗುತ್ತದೆ.

**ಜೀವನ್ಮುಕ್ತಿ:** ಅದ್ವೈತದರ್ಶನವು ಜೀವನ್ಮುಕ್ತಿಯನ್ನು ಒಪ್ಪುತ್ತದೆ ಎಂಬುದೊಂದು ವಿಶೇಷ. ದೇಹವಿರುವಾಗಲೇ ಜೀವನು ಮುಕ್ತನಾಗಬಹುದು. ಜ್ಞಾನವೇ ತರಣೋಪಾಯವಾದ್ದರಿಂದ ಬ್ರಹ್ಮಸಾಕ್ಷಾತ್ಕಾರವು ಯಾರಿಗಾಗುವುದೋ ಅವನು ಮುಕ್ತನೇ. ದೇಹವು ಪ್ರಾರಬ್ಧಕರ್ಮವಶದಿಂದ ಉಳಿದಿರುತ್ತದೆ. 'ಕ್ಷೀಯಂತೇ ಚಾಸ್ಯ ಕರ್ಮಾಣಿ ತಸ್ಮಿನ್ ದೃಷ್ಟೇ ಪರಾವರೇ' ಎಂದು ಜ್ಞಾನದಿಂದ ಕರ್ಮಕ್ಷಯವನ್ನು ಹೇಳಿದ್ದರೂ ಪ್ರಾರಬ್ಧಕರ್ಮ ಒಂದನ್ನು ಬಿಟ್ಟು ಉಳಿದ ಕರ್ಮಗಳು ನಶಿಸುತ್ತವೆ, ಎಂದು ವ್ಯವಸ್ಥೆ ಮಾಡಲಾಗಿದೆ. ಪ್ರಾರಬ್ಧಕರ್ಮಭೋಗವೂ ಅನ್ಯರ ದೃಷ್ಟಿಯಿಂದಲೇ ಹೊರತು ಜೀವನ್ಮುಕ್ತನ ದೃಷ್ಟಿಯಿಂದಲ್ಲ. ಜೀವನ್ಮುಕ್ತಿಯನ್ನು ಒಪ್ಪುವುದರಿಂದಲೇ ಗುರುಶಿಷ್ಯಪರಂಪರೆಯಿಂದ ಸಂಪ್ರದಾಯವು ಮುಂದುವರಿಯುತ್ತದೆ. ಜೀವನ್ಮುಕ್ತಿಯನ್ನು ಒಪ್ಪದಿದ್ದರೆ ಬದುಕಿದವನು ಜ್ಞಾನಿಯೇ ಅಲ್ಲವೆನ್ನಬೇಕಾದೀತು. ಆತನಿಗೆ ಉಪಾದೇಶಾಧಿಕಾರವೇ ಇಲ್ಲದೆ ಹೋದೀತು. ಈ ಕೆಳಗಣ ವಾಕ್ಯಗಳು ಜೀವನ್ಮುಕ್ತಿಗೆ ಪ್ರಮಾಣ.

೧. ಅತ್ರ ಬ್ರಹ್ಮಸಮಶ್ನುತೇ (ಕಠ. ೬-೧೪) ಇಲ್ಲಿ ಈ ದೇಹದಲ್ಲಿ ಬ್ರಹ್ಮವನ್ನು ಸೇರುತ್ತಾನೆ. ೨. ವಿದ್ವಾನ್ ಅಮೃತ ಇಹ ಭವತಿ (ಪು. ಸೂ.) ಬ್ರಹ್ಮಜ್ಞಾನಿಯು ಇಲ್ಲಿಯೆ ಅಮೃತ (ಮುಕ್ತ) ನಾಗುತ್ತಾನೆ. ೩ ಯಃ ಸದಾ ಮುಕ್ತ ಏವ ಸಃ (ಗೀತಾ ೫-೨೮) ಇಚ್ಛಾಭಯಕ್ರೋಧರಹಿತನಾದ ಮುನಿಯು ಮುಕ್ತನೆ ಸರಿ. ೪. ಇಹೈವ ತೈರ್ಜಿತಃ ಸರ್ಗೋ ಯೇಷಾಂ ಸಾಮ್ಯೇಸ್ಥಿತಂ ಮನಃ (ಗೀತಾ. ೫-೧೯) ಯಾರ ಮನಸ್ಸು ಸಮಭಾವವೆನಿಸಿದ ಬ್ರಹ್ಮದಲ್ಲಿ ನೆಲೆಸಿದೆಯೋ ಅವರು ಇಲ್ಲಿಯೇ (ಬದುಕಿರುವಾಗಲೇ) ಜನ್ಮವನ್ನು ಗೆದ್ದಿರುತ್ತಾರೆ.

**ಮೋಕ್ಷಸಾಧನ:** ಮೋಕ್ಷವು ನಿತ್ಯಸಿದ್ಧವಾದುದು. ಅದನ್ನು ಹೊಸದಾಗಿ ಸಾಧಿಸಬೇಕಾದದ್ದಿಲ್ಲ. ಮೋಕ್ಷವು ನಿತ್ಯಸಿದ್ಧವಾಗಿರುವ ಬ್ರಹ್ಮಾತ್ಮಸ್ವರೂಪವೇ. ಬಂಧವು ಅವಿದ್ಯಾಕೃತವಾದ್ದರಿಂದ ಅವಿದ್ಯಾನಿವೃತ್ತಿ ಸಾಧ್ಯ. ಅವಿದ್ಯೆಯೆಂದರೆ ಅಜ್ಞಾನ. ಅದರ ನಿವೃತ್ತಿ ಜ್ಞಾನದಿಂದ ಮಾತ್ರ.

> ತಮೇವ ವಿದಿತ್ವಾ ಅತಿಮೃತ್ಯುಮೇತಿ ।
> ನಾನ್ಯಃ ಪಂಥಾ ವಿದ್ಯತೇಽಯನಾಯ ॥

'ಆತ್ಮವನ್ನು ತಿಳಿದೇ ಮೃತ್ಯುವಾದ ಸಂಸಾರವನ್ನು ದಾಟುತ್ತಾನೆ. ಸಂಸಾರವನ್ನು ದಾಟಲು ಬೇರೆ ಮಾರ್ಗವಿಲ್ಲ' ಆದ್ದರಿಂದ ಮೋಕ್ಷಕ್ಕೆ ಜ್ಞಾನವು ಸಾಧನವೆಂದು

ಪರ್ಯಾಯವಾಗಿ ಹೇಳಿದಂತಾಗುತ್ತದೆ. ಸಮ್ಯಗ್‌ಜ್ಞಾನ ಉದಯಿಸಬೇಕಾದರೆ ಹಲವು ಸಾಧನಗಳನ್ನು ಅವಲಂಬಿಸುವುದು ಅವಶ್ಯಕ. 'ಶಮದಮಾದಿ ಸಂಸ್ಕೃತಂ ಮನಃ ಆತ್ಮದರ್ಶನೇ ಕರಣಂ' ಎಂದು ಶ್ರೀ ಶಂಕರಾಚಾರ್ಯರು ಹೇಳಿದ್ದಾರೆ. ಶಮದಮಾದಿಗಳಿಂದ ಸಂಸ್ಕಾರ ಹೊಂದಿದ ಮನಸ್ಸು ಆತ್ಮಜ್ಞಾನಕ್ಕೆ ಸಾಧನ. ಆದ್ದರಿಂದ ಹಿಂದೆ ವಿಚಾರ ಮಾರ್ಗದಲ್ಲಿ ಹೇಳಿದ ಸಾಧನ ಚತುಷ್ಟಯವನ್ನು ಇಲ್ಲಿ ಮೋಕ್ಷ ಸಾಧನವೆಂದು ಪರಿಗಣಿಸಬೇಕು.

**ಕರ್ಮ :** ಯಾವನಿಗೆ ಬ್ರಹ್ಮಜ್ಞಾನವಾಗಿಲ್ಲವೋ ಆತನು ಶಾಸ್ತ್ರೋಕ್ತವಾದ ಕರ್ಮವನ್ನು ಮಾಡಲೇಬೇಕು. ನಿಷಿದ್ಧವಾದದ್ದನ್ನು ವರ್ಜಿಸಲೇಬೇಕು. ಫಲಕಾಮನೆಯಿಂದ ಮಾಡುವ ಕರ್ಮ ಮುಮುಕ್ಷುವಿಗೆ ಹಿತಕರವಲ್ಲ. ಅದು ಮತ್ತೆ ಬಂಧಕವೇ ಆಗುತ್ತದೆ. ಆದ್ದರಿಂದ ಭಗವದ್ಗೀತೆಯಲ್ಲಿ ನಿಷ್ಕಾಮಕರ್ಮವನ್ನು ಬೋಧಿಸಿದೆ. ಶಾಸ್ತ್ರೋಕ್ತವಾದ ಕರ್ಮವನ್ನು ಫಲಾಪೇಕ್ಷೆ ಇಲ್ಲದೆ ಮಾಡಿದಾಗ ಅದು ಚಿತ್ತಶುದ್ಧಿಗೆ ಕಾರಣವಾಗುತ್ತದೆ. ಹೀಗೆ ಪರಂಪರೆಯಿಂದ ಕರ್ಮವು ಜ್ಞಾನಕ್ಕೆ ಉಪಯುಕ್ತವಾಗುತ್ತದೆ.

**ಭಕ್ತಿ :** ಅದ್ವೈತದರ್ಶನದಲ್ಲಿ ಭಕ್ತಿಗೆ ಪ್ರಮುಖಸ್ಥಾನ ಉಂಟು. ಇದನ್ನೇ ಸಗುಣೋಪಾಸನೆ ಎನ್ನುತ್ತಾರೆ. ಉಪನಿಷತ್ತುಗಳಲ್ಲಿಯೂ ಭಗವದ್ಗೀತೆಯಲ್ಲಿಯೂ ಇದನ್ನು ವಿಶೇಷವಾಗಿ ಸ್ತುತಿಸಿದೆ. ಭಕ್ತಿಯಿಂದ ಮನಸ್ಸಿನ ಕಲ್ಮಲಗಳು ತೊಡೆದು ಹೋಗುತ್ತವೆ. ಈಶ್ವರನು ಪ್ರಸನ್ನನಾಗಿ ಸತ್ಸಂಗವನ್ನು ಸದ್ಗುರು ಲಾಭವನ್ನೂ ಅನುಗ್ರಹಿಸುತ್ತಾನೆ. ನಿಷ್ಕಾಮಕರ್ಮದಂತೆ ಭಕ್ತಿಯೂ ಚಿತ್ತಶುದ್ಧಿಗೆ ಅತ್ಯಂತ ಸಹಕಾರಿ.

**ಪ್ರಮಾಣ :** ಅದ್ವೈತದರ್ಶನಕ್ಕೆ ಅನುಗುಣವಾದ ಕೆಲವು ಪ್ರಮಾಣವಾಕ್ಯಗಳನ್ನು ಇಲ್ಲಿ ಉದಾಹರಿಸಲಾಗಿದೆ—

೧. ಏಕಮೇವಾದ್ವಿತೀಯಂ ಬ್ರಹ್ಮ (ಛಾಂ. ೬-೨-೨) ಬ್ರಹ್ಮವು ಒಂದೇ ಆಗಿ ದ್ವಿತೀಯ ವಸ್ತುರಹಿತವಾಗಿದೆ. ೨. ಸತ್ಯಂ ಜ್ಞಾನಮನಂತಂ ಬ್ರಹ್ಮ (ತೈ. ೨-೧) ಸತ್ಯವೂ ಜ್ಞಾನಸ್ವರೂಪವೂ ಅನಂತವೂ ಆದದ್ದು ಬ್ರಹ್ಮ. ೩. ಆನಂದೋ ಬ್ರಹ್ಮೇತಿ ವ್ಯಜಾನಾತ್ (ತೈ. ೩-೧) ಆನಂದವೇ ಬ್ರಹ್ಮವೆಂದು (ಭೃಗು) ತಿಳಿದುಕೊಂಡನು. ೪. ಸ ತ್ವಮೇವ ತ್ವಮೇವ ತತ್ (ಕೈವಲ್ಯ ೧-೧೬) ಬ್ರಹ್ಮವು ನೀನೇ, ನೀನೇ ಬ್ರಹ್ಮ. ೫. ತತ್ರಕೋ ಮೋಹಃ ಕಃ ಶೋಕ ಏಕತ್ವಮನುಪಶ್ಯತಃ (ಈಶ. ೭) ಏಕತ್ವವನ್ನು ಕಾಣತಕ್ಕವನಿಗೆ ಶೋಕವೆಲ್ಲಿದೆ? ಮೋಹವೆಲ್ಲಿದೆ? ೬. ಮೃತ್ಯೋಃ ಸ ಮೃತ್ಯುಮಾಪ್ನೋತಿಯ ಇಹ ನಾನೇವ ಪಶ್ಯತಿ (ಕಾ. ೪-೧೦) ಯಾರು ಇಲ್ಲಿ ಅನೇಕವಸ್ತುವಿದೆಯೆಂದು ತಿಳಿಯುವನೋ ಅವನು ಮೃತ್ಯುವಿನಿಂದ ಮೃತ್ಯುವಿನ ಬಾಯಿಗೆ ಇಳಿ



ಯುವನು. ೭. ಸರ್ವಂಖಲ್ವಿದಂ ಬ್ರಹ್ಮ (ಛಾ. ೩-೧೪-೧) ಇದೆಲ್ಲವೂ ಬ್ರಹ್ಮವೇ ಸರಿ. ೮. ಯ ಏವಂ ವೇದಾಹಂ ಬ್ರಹ್ಮಾಸ್ಮೀತಿ ಸ ಇದಂ ಸರ್ವಂ ಭವತಿ (ಬೃ. ೧-೪-೧೦) ನಾನು ಬ್ರಹ್ಮನಾಗಿದ್ದೇನೆ, ಎಂದು ಯಾವಾತನು ತಿಳಿಯುವನೋ ಅವನು ಈ ಸರ್ವವೂ (ಬ್ರಹ್ಮ)ಆಗಿಬಿಡುತ್ತಾನೆ.

**ಉಪಸಂಹಾರ :** ಹೀಗೆ ಅದ್ವೈತವನ್ನು ಬೋಧಿಸುವ ಮತ್ತು ದ್ವೈತವನ್ನು ನಿಷೇಧಿಸುವ ಶ್ರುತಿವಾಕ್ಯಗಳನ್ನು ಹೇರಳವಾಗಿ ಉದಾಹರಿಸಬಹುದು, ಅದ್ವೈತವನ್ನು ನಿರಾಕರಿಸುವ ಶ್ರುತಿವಾಕ್ಯವು ನಮಗೆ ದೊರೆತಿಲ್ಲವೆಂಬುದೊಂದು ವಿಶೇಷ. ಆದರೆ ದ್ವೈತಮಾರ್ಗದಲ್ಲಿ ನಿಂತು ಅರ್ಥಮಾಡಬೇಕಾದ ದ್ವೈತಸೂಚಕವಾದ 'ದ್ವಾಸುಪರ್ಣಾ ಸಯುಜಾ ಸಖಾಯಾ—' ಮುಂತಾದ ಶ್ರುತಿವಾಕ್ಯಗಳು ಉಂಟು. ಇವುಗಳ ಸಮನ್ವಯ ಅದ್ವೈತದರ್ಶನಕ್ಕೆ ಕಠಿಣವಲ್ಲ, ಜ್ಞಾನೋದಯಕ್ಕೆ ಪೂರ್ವದಲ್ಲಿ ಕರ್ಮ ಮತ್ತು ಸಗುಣೋಪಾಸನೆಗಳನ್ನು ಈ ದರ್ಶನವು ಅಂಗೀಕರಿಸಿ ಔಪಾಧಿಕವಾಗಿ ಜೀವೇಶ್ವರಭೇದವನ್ನು ಒಪ್ಪಿದೆ. ಆದ್ದರಿಂದ ದ್ವೈತಬೋಧಕ ಶ್ರುತಿಗಳನ್ನು ಸಮಂಜಸವಾಗಿ ಸಮನ್ವಯಗೊಳಿಸಲು ಸಾಧ್ಯವಾಗಿದೆ. ಇದು ಯಾವದರ್ಶನಕ್ಕೂ ವಿರುದ್ಧವಾಗದಂತೆ ಎಲ್ಲ ದರ್ಶನಗಳ ಸಾರವನ್ನು ಅಧಿಕಾರಿ ಭೇದದಿಂದ ತನ್ನಲ್ಲಿ ಅಳವಡಿಸಿಕೊಂಡಿದೆ.

ಆತ್ಮನಲ್ಲಿ ಸ್ತ್ರೀ, ಪುರುಷ–ಎಂಬ ಭೇದವನ್ನಾಗಲಿ ಉತ್ತಮ, ಮಧ್ಯಮ, ಕನಿಷ್ಠ ಎಂಬ ತಾರತಮ್ಯವನ್ನಾಗಲಿ ಈ ದರ್ಶನವು ಒಪ್ಪುವುದಿಲ್ಲ. ಮೋಕ್ಷಸ್ಥಿತಿಯಲ್ಲಿ ಯಾವ ತರತಮಭಾವವೂ ಇಲ್ಲ. ಸನ್ಮಾರ್ಗದಲ್ಲಿ ಪ್ರಯತ್ನಿಸುವ ಸಕಲ ಜೀವರಿಗೂ ಮೋಕ್ಷದ ಬಾಗಿಲು ತೆರೆದಿದೆ.

ಅದ್ವೈತದರ್ಶನವು ಏಕೇಶ್ವರವಾದವನ್ನು ಪುರಸ್ಕರಿಸುತ್ತದೆ. ಈಶ್ವರನು ನಿರಾಕಾರನಾದರೂ ನರಾಕಾರನೂ ಆಗಬಲ್ಲ, ಜಗದಾಕಾರನೂ ಆಗಬಲ್ಲ. ಮಾಯಿಕವಾದ ದೇಹದಿಂದ ಅವನು ಸ್ತ್ರೀದೇವತೆಯೂ ಹೌದು; ಪುರುಷದೇವತೆಯೂ ಹೌದು. ಬ್ರಹ್ಮ, ವಿಷ್ಣು, ಶಿವ–ಮುಂತಾದವರೆಲ್ಲರೂ ಭಕ್ತರು ಕಲ್ಪಿಸಿಕೊಂಡ ಸಗುಣಮೂರ್ತಿಗಳು. ಸಗುಣೋಪಾಸನೆ ನಿರ್ಗುಣೋಪಾಸನೆಗೆ ಮೊದಲನೆಯ ಹಂತವೆಂದು ಈ ದರ್ಶನವು ತಿಳಿಯುತ್ತದೆ.

ಮಹಾತ್ಮರು ಬೋಧಿಸಿದ ಎಲ್ಲ ಮತಗಳಿಗೂ ಇಲ್ಲಿ ಪುರಸ್ಕಾರವುಂಟು. ಅದೆಲ್ಲವೂ ಶ್ರೇಯಸ್ಕರವೇ, ಆದರೆ ಅಧಿಕಾರಭೇದದಿಂದ ಅದು ವ್ಯವಸ್ಥಿತವಾಗುತ್ತದೆ. ಮತೀಯ ಭಾವನೆಗಳಿಗೂ ಮತೀಯ ಲಾಂಛನಗಳಿಗೂ ಈ ದರ್ಶನದಲ್ಲಿ ಪುರಸ್ಕಾರವೂ ಇಲ್ಲ, ತಿರಸ್ಕಾರವೂ ಇಲ್ಲ. ಸೋಪಾನಕ್ರಮದಿಂದ ಉತ್ತಮಾಧಿಕಾರಿಗೆ ಗಮ್ಯವಾದುದು ಅದ್ವೈತವೇ.

# ಹೈದರಾಬಾದು ಕರ್ನಾಟಕದ ಪ್ರಾಚೀನ ಗುರುಕುಲಗಳು

—ಪ್ರೊ. ಡಿ. ವಸಂತ ಕುಷ್ಟಗಿ

ಮನುಷ್ಯನು ಬೆಳೆದಿದ್ದಾನೆಂಬುದನ್ನು ಅವನ ಎತ್ತರ ಮತ್ತು ಗಾತ್ರದ ಮೇಲೆ ಗುರುತಿಸುವುದಲ್ಲ. ಅದನ್ನು ಅವನ ಹೃದಯವಂತಿಕೆ ಮತ್ತು ಬುದ್ಧಿವಂತಿಕೆಗಳ ಮೇಲೆ ಗುರುತಿಸಬೇಕಾದುದು ಸಂಸ್ಕೃತಿಯ ಲಕ್ಷಣ. ಇದನ್ನು ಕರ್ನಾಟಕ ಜನತೆ ಬಹು ಪ್ರಾಚೀನಕಾಲದಿಂದಲೇ ವಿದ್ಯೆಗೆ ಮಹತ್ವವನ್ನು ಕೊಟ್ಟು ಶಿಕ್ಷಣ ಕೇಂದ್ರಗಳನ್ನು ನಿರ್ಮಿಸಿಕೊಂಡು ಪಾಂಡಿತ್ಯವನ್ನು ಈ ಜನತೆ ಸಂಪಾದನೆ ಮಾಡಿತು. ಇಲ್ಲಿ ಪಾಂಡಿತ್ಯವೆಂದರೆ ಕೇವಲ ಪುಸ್ತಕ ಜ್ಞಾನವೆಂದು ಅರ್ಥ ಮಾಡಕೂಡದು. ಜ್ಞಾನಸಂಗ್ರಹದ ಜೊತೆಗೆ ಲೌಕಿಕ ವ್ಯವಹಾರ ಚಾತುರ್ಯವೂ ಅದರಲ್ಲಿ ಸೇರಿರಬೇಕಾದುದು ಅಗತ್ಯವೆಂದು ಭಾವಿಸಬೇಕಾಗುತ್ತದೆ. ಕೆಲವು ಸಲ ಅಕ್ಷರಜ್ಞಾನವಿಲ್ಲದಿದ್ದರೂ ನಡೆಯುತ್ತದೆ. ಆದರೆ ಲೌಕಿಕ ಜ್ಞಾನವು ಅತ್ಯವಶ್ಯ ಬೇಕಾಗುತ್ತದೆ. ಇಂತಹ ಲೌಕಿಕ ಜ್ಞಾನದಲ್ಲಿ ಹೃದಯವಿಕಾಸ ಮತ್ತು ಮನಸ್ಸಿನ ಪಕ್ವತೆಗಳು ಮಹತ್ವದ ಪಾತ್ರವನ್ನು ವಹಿಸಿರುತ್ತವೆ. ಬಹುಷ: ಇದನ್ನು ಕನ್ನಡಿಗರಲ್ಲಿ ಗುರುತಿಸಿ ನೃಪತುಂಗನ ಕಾಲದ ಕವಿರಾಜ ಮಾರ್ಗದಲ್ಲಿ,

"ಪದನರಿದು ನುಡಿಯಲುಂ ನುಡಿ
ದುದನರಿದಾರಯಲುಮಾರ್ಪರಾ ನಾಡವರ್ಗಳ್
ಚದುರರ್ ನಿಜದಿಂ ಕುರಿತೋ
ದದೆಯುಂ ಕಾವ್ಯಪ್ರಯೋಗ ಪರಿಣತ ಮತಿಗಳ್ ||
ಕುರಿತವರಲ್ಲದೆ ಮತ್ತಂ
ಪೆಱರುಂ ತಂತಮ್ಮ ನುಡಿಯೊಳೆಲ್ಲರ್ ಜಾಣರ್
ಕಿರುಮಕ್ಕಳು ಮಾಪಾಗರು
ಮರಿ ಪಲ್ಕರಿವರ್ ವಿವೇಕಮಂ ಮಾತುಗಳಂ''

ಎಂಬಂತಹ ಪ್ರಶಸ್ತಿಯ ಮಾತುಗಳು ಕನ್ನಡಿಗರ ಬಗೆಗೆ ಉಕ್ತವಾಗಿರುವುದನ್ನು ಗಮನಿಸಬಹುದಾಗಿದೆ.

ಇತಿಹಾಸವನ್ನು ತೆರೆದು ನೋಡಿದಾಗ ಕರ್ನಾಟಕದಲ್ಲಿಯ ದೇವಾಲಯ, ಮಠ, ಬ್ರಹ್ಮಪುರಿ, ಅಗ್ರಹಾರ ಇವುಗಳು ಪ್ರೌಢಶಿಕ್ಷಣದ ಕೇಂದ್ರಗಳಾಗಿದ್ದವು.



ಎಂಬುದೂ ತಿಳಿದು ಬರುತ್ತದೆ. ಈ ಕೇಂದ್ರಗಳಲ್ಲಿ ಆಧ್ಯಾತ್ಮಿಕ ಶಿಕ್ಷಣದ ಜೊತೆಗೆ ಲೌಕಿಕ ಶಿಕ್ಷಣ ಪ್ರದಾನವಾಗುತ್ತಿತ್ತೆಂಬುದನ್ನು ಕಾಣಬಹುದಾಗಿದೆ. ದೇವಾಲಯಗಳಲ್ಲಿ ಪಂಡಿತರೂ, ಮಠಗಳಲ್ಲಿ ಮಠಾಧಿಪತಿಗಳೂ ತಮ್ಮ ತಮ್ಮ ಶಿಷ್ಯ ಪರಂಪರೆಯ ಮನೆತನಗಳ ಮಕ್ಕಳಿಗೆ ಪಾಠಪ್ರವಚನಗಳನ್ನು ಮಾಡಿಸುತ್ತಿದ್ದರು. ಆದರೆ ಬ್ರಹ್ಮಪುರಿಗಳು ನಗರಗಳಲ್ಲಿ ವಿದ್ಯಾದಾನ ಮಾಡುವ ಕೇಂದ್ರಗಳಾಗಿರುತ್ತಿದ್ದವು. ಇವುಗಳನ್ನು ಅನೇಕ ಕಡೆ ರಾಜರುಗಳು ಇನ್ನೂ ಕೆಲವು ಕಡೆ ಉಳ್ಳವರು ಸ್ಥಾಪಿಸಿ ನಡೆಸಿಕೊಂಡು ಬರುವ ರೂಢಿಯಿದ್ದಿತು. ಇವು ನಗರಗಳಲ್ಲಿಯೇ ಇರುತ್ತಿದ್ದುದರಿಂದ ಅಲ್ಲಿಯ ಉಪಾಧ್ಯಾಯರು ಮಹಾವಿದ್ವಾಂಸರು, ದಿಗ್ದಂತಿಗಳೇ ಆಗಿರುತ್ತಿದ್ದರು. ಇಂತಹ ಒಂದು ಬ್ರಹ್ಮಪುರಿಯು ಕಲಬುರಗಿಯಲ್ಲಿಯೂ ಇದ್ದಿತು. ಅಂತೆಯೇ ಈಗಲೂ ಕಲಬುರಗಿಯಲ್ಲಿ ಒಂದು ಓಣಿಯ ಹೆಸರು 'ಬ್ರಹ್ಮಪುರ' ಎಂದು ಇದೆ. ಈಗಲೂ ಅದು ವಿದ್ಯಾಕೇಂದ್ರವಾಗಿಯೇ ಮೆರೆಯುತ್ತಿದೆ. ಅಲ್ಲದೆ ಹೈದರಾಬಾದು ಕರ್ನಾಟಕದಲ್ಲಿಯೇ ಆ ನೆಲ ವಿದ್ಯಾಸ್ಫೂರ್ತಿಯನ್ನು ನೀಡುವ ಪವಿತ್ರ ತಾಣವಾಗಿದೆ.

ಅಗ್ರಹಾರವೆಂದರೆ ವಿದ್ಯಾಭಿವೃದ್ಧಿಗಾಗಿ ನಿರ್ಮಿಸಿದ ಪ್ರತ್ಯೇಕ ಸ್ಥಳ. ಇಂತಹ ಸ್ಥಳಗಳು ಸ್ವತಂತ್ರವಾದ ಸ್ಥಳಗಳೇ ಆಗಿರುತ್ತಿದ್ದವು. ಅಲ್ಲಿ ವಿದ್ಯಾಸಂಪನ್ನರಾದ ಬ್ರಾಹ್ಮಣರು ಅಧ್ಯಯನ ಅಧ್ಯಾಪನಗಳನ್ನು ಮಾಡುತ್ತ ಆ ಪ್ರದೇಶದ ಒಡೆತನವನ್ನು ತಮ್ಮ ಅಂಕಿತದಲ್ಲಿಯೇ ಇಟ್ಟುಕೊಂಡಿರುತ್ತಿದ್ದರು. ವಿದ್ಯಾಭಿಮಾನಿಗಳಾದ ಅರಸರು ಇಂತಹ ಸ್ಥಳಗಳನ್ನು ದತ್ತಿಯಾಗಿ ಪಂಡಿತರಿಗೆ ಕೊಡುತ್ತಿದ್ದ ನಿದರ್ಶನಗಳಿವೆ. ಹೀಗೆ ಅಗ್ರಹಾರಗಳನ್ನು ದತ್ತಿಪಡೆದ ಬ್ರಾಹ್ಮಣರಿಗೆ ಮಹಾಜನರೆಂದು ಕರೆಯುತ್ತಿದ್ದರು. ಅವರು, ''ವೇದ, ವೇದಾಂಗ, ಉಪಾಂಗ, ಶಾಸ್ತ್ರ, ಅಷ್ಟಾದಶ ಪುರಾಣ, ಸ್ಮೃತಿ' ಗಳನ್ನು ಅರಿತಿದ್ದು ವಾಗ್ಭೂಷಣರೂ ಷಟ್ಕರ್ಮನಿರತರೂ, ಆಗಿರಬೇಕಾಗುತ್ತಿತ್ತು. ಅಲ್ಲಿ ಅವರ ಜೊತೆಯಲ್ಲಿ ಇತರ ಜಾತಿಮತ ಸಂಪ್ರದಾಯದವರೂ ಇರಬಹುದಾಗಿತ್ತು ಇಂತಹ ಸಂಸ್ಕಾರಪೂರ್ಣ ಸುಸಂಸ್ಕೃತ ವಿದ್ಯೆಯನ್ನು ಪ್ರದಾನ ಮಾಡಲಾಗುತ್ತಿತ್ತು. ಇಂತಹ ಅಗ್ರಹಾರಗಳು ಈಗ ಹಾಳಾದ ಹಳ್ಳಿಗಳಾಗಿ ಗತವೈಭವನ್ನು ಹೇಳುತ್ತ ನಿಂತಿವೆ.

ಈ ದೇವಾಲಯ, ಮಠ, ಬ್ರಹ್ಮಪುರಿ, ಅಗ್ರಹಾರಗಳು, ಗುರುಕುಲಪದ್ಧತಿಯು ಹಂತಹಂತಗಳಲ್ಲಿ ಬೆಳೆದು ಬಂದ ರೂಪಗಳು. ಈ ಗುರುಕುಲಪದ್ಧತಿಯು ನಮ್ಮಲ್ಲಿ ಬಹು ಪ್ರಾಚೀನಕಾಲದಿಂದಲೂ ತನ್ನ ಆದರ್ಶಗಳನ್ನು ಮೆರೆದು ನಿಂತಿದೆ. ಹಿಂದೆ ಆತ್ಮೋನ್ನತಿಗಾಗಿ, ಆತ್ಮಸಾಕ್ಷಾತ್ಕಾರಕ್ಕಾಗಿ ಅರಣ್ಯಗಳಲ್ಲಿ ಋಷಿಗಳು ಮುನಿಗಳು ಸಹಸ್ರಕ್ಕೂ ಹೆಚ್ಚಾಗಿ ವಿದ್ಯಾರ್ಥಿಗಳನ್ನು ಸೇರಿಸಿಕೊಂಡು ವಿದ್ಯಾ ಪ್ರದಾನ ಮಾಡುತ್ತಿದ್ದ ದಾಖಲೆಗಳಿವೆ. ಅಲ್ಲಿ ವಿದ್ಯಾರ್ಥಿಗಳು ಅನ್ನ ಬಟ್ಟೆಗಳಿಗಾಗಿ ತಮ್ಮ ತಂದೆತಾಯಿಗಳ ಕಡೆಗೆ ಮನೆಯ ಕಡೆಗೆ ಚಿತ್ತವನ್ನು ಹರಿಸಬೇಕಾಗಿರಲಿಲ್ಲ. ಆಗ

ಗುರುಗಳೇ ಆ ಭಾರವನ್ನೆಲ್ಲ ಹೊರುತ್ತಿದ್ದರು. ಹೀಗಾಗಿ ವಿದ್ಯಾರ್ಥಿಗಳ ಕೆಲಸವು ವಿದ್ಯಾವ್ಯಾಸಂಗವಷ್ಟೇ ಆಗಿರುತ್ತಿತ್ತು. ಹತ್ತುಸಾವಿರ ವಿದ್ಯಾರ್ಥಿಗಳಿಗೆ ಅನ್ನ ಬಟ್ಟೆಗಳನ್ನು ಒದಗಿಸಿ ಶಿಕ್ಷಣ ನೀಡುತ್ತಿದ್ದ ಗುರುಗಳಿಗೆ ಕುಲಪತಿಗಳೆಂದು ಕರೆಯಲಾಗುತ್ತಿತ್ತು. ಪುರಾಣಗಳಲ್ಲಿ ಬರುವ ವಾಲ್ಮೀಕಿ, ಕಣ್ವ, ಶೌನಕ, ಸಾಂದೀಪನಿ ಮೊದಲಾದವರು ಅಂತಹ ಕುಲಪತಿಗಳು. ಅವರ ಹತ್ತಿರವಿರುವ ವಿದ್ಯಾರ್ಥಿಗಳು ಗುರುಕಟಾಕ್ಷಕ್ಕಾಗಿ ಕಾದು ನಿಂತವರಾಗಿರುತ್ತಿದ್ದರು. ಅವರು ಗುರುಗಳ ಅನುಗ್ರಹದಿಂದ ವಿದ್ಯಾಸಂಪನ್ನರಾಗಿ ಇಂದಿಗೂ ಆದರ್ಶವಾಗಿ ನಿಂತಿರುವ ಸತ್ಯಕಾಮ, ಆರುಣಿ ಉದಂಕರನ್ನು ನೆನೆದುಕೊಳ್ಳಬಹುದು.

ಗುರುಕುಲಪದ್ಧತಿಯಲ್ಲಿಯ ಈ ವಿವೇಚನೆಯಲ್ಲಿ ವಿದ್ಯಾರ್ಥಿಗಳಿಗೆ ವಿದ್ಯಾರ್ಜನೆಯ ಭಾರವೊಂದಲ್ಲದೆ ಮತ್ತಾವ ಭಾರ, ಚಿಂತೆಗಳೂ ಅವರಿಗೆ ಇರುತ್ತಿರಲಿಲ್ಲವೆಂದು ತಿಳಿದು ಬಂದಿದೆ. ಇಂತಹ ಗುರುಕುಲಗಳ ಸಮನಾದ ವಿದ್ಯಾಕೇಂದ್ರಗಳೆಂದರೆ, ಬಳ್ಳಾರಿ ಒಳಿಯ ಕಾರ್ತಿಕೇಯ ತಪೋವನ, ಸೊಗಲದ ಸುವರ್ಣಾಕ್ಷಿ ತಪೋವನಗಳನ್ನು ನೆನೆಯಬಹುದು. ಅದೇ ರೀತಿ ಹೈದರಾಬಾದು ಕರ್ನಾಟಕ ಕಲಬುರಗಿ, ರಾಯಚೂರು, ಬೀದರ ಜಿಲ್ಲೆಗಳ ಭಾಗಗಳಲ್ಲಿ ಇಂತಹ ವಿದ್ಯಾಕೇಂದ್ರಗಳನ್ನು ಕಾಣಬಹುದಾಗಿದೆ. ಏಕೆಂದರೆ, ಈ ಭಾಗದಲ್ಲಿ ಚಾಲುಕ್ಯರು, ರಾಷ್ಟ್ರಕೂಟರು ಮೊದಲಾದ ಅರಸೊತ್ತಿಗೆಗಳು ಸಮೃದ್ಧಿಯನ್ನುಂಟುಮಾಡಿ ಪ್ರಜೆಗಳ ಪ್ರೀತಿ ವಿಶ್ವಾಸಗಳನ್ನು ಗಳಿಸಿಕೊಂಡು ಕಲೆ ಸಾಹಿತ್ಯಗಳನ್ನು ಪೋಷಿಸಿ ಗುರುಕುಲ ಮಾದರಿಯ ಅನೇಕ ವಿದ್ಯಾಕೇಂದ್ರಗಳನ್ನು ಸ್ಥಾಪಿಸಿದವು. ಬೆಳೆಸಿದುವು. ಅವುಗಳಲ್ಲಿ ಪ್ರಾಚೀನವೂ, ಅತ್ಯಂತ ಮಹತ್ವದವೂ ಆದ ನಾಗಾಯಿ, ಕುಕನೂರು ಅಗ್ರಹಾರಗಳನ್ನು ಇಲ್ಲಿ ಉಲ್ಲೇಖಿಸಬಹುದು.

ನಾಗಾಯಿ ಎಂಬುದು ಈಗ ಕಲುಬುರಗಿ ಜಿಲ್ಲೆಯ ಚಿತ್ತಾಪುರ ತಾಲ್ಲೂಕಿಗೆ ಸೇರಿದ ಪ್ರದೇಶ; ಇದು ಚಿತ್ತಾಪುರದಿಂದ ಎರಡು ಮೈಲು ಅಂತರದಲ್ಲಿರುವ ಪ್ರಾಚೀನತೆಯನ್ನು ಕಂಡುಹಿಡಿಯಲು ಅವಶೇಷಗಳು ಆಹ್ವಾನವನ್ನು ನೀಡಿ ನಿಂತಿರುವ ಇತಿಹಾಸ ಪ್ರಸಿದ್ಧಿಯನ್ನು ಪಡೆದ ಪ್ರದೇಶ. ಇದನ್ನು ನಾಗವಾಪಿ, ನಾಗಾಯಿ, ನಾಗಾವಿ, ಎಂಬ ಹೆಸರುಗಳಿಂದ ಗುರುತಿಸಬಹುದು. ಶಾಸನಗಳಂತೂ ಹೊಗಳಿದ್ದೇ ಹೊಗಳಿದ್ದು. "ಚತುರ್ವೇದ ಪಾರಾವಾರ ಪಾರಗರಪ್ಪ ನಾಲ್ಕುನೂರು ವಿಪ್ರೋತ್ತಮರಿಂದ ಅಭಿನವ ಬ್ರಹ್ಮಲೋಕವೆಂಬಂತೆ ವಸುಮತೀ ತಳಕ್ಕೆ ತಲೆಯೆಂಬಂತೆ ಕುಂತಳ ಮಹೀತಳಕ್ಕೆ ತಿಲಕವೆಂಬಂತೆ ಮಹಾ ಅಗ್ರಹಾರ ನಾಗಾವಿ" ಎಂದು ಒಂದು ಶಾಸನವು ಮೆಚ್ಚಿ ನುಡಿದಿರುವುದನ್ನು ಗಮನಿಸಬಹುದು. ಇಲ್ಲಿ ಶಿಲಾಹಾರ, ಶಾತವಾಹನ, ಶಾಕ್ಯರು, ಹೈಹಯರು, ರಾಷ್ಟ್ರಕೂಟ, ಚಾಲುಕ್ಯರ ಕಾಲದಿಂದಲೂ



ವಿದ್ಯಾಪ್ರದಾನ ನಡೆದಿದೆಯೆಂಬುದಕ್ಕೆ ಸಾಕ್ಷಿಗಳಿವೆ. ಈ ಎಲ್ಲ ಮನೆತನಗಳ ಅರಸರು ನಾಗಾಯಿಯನ್ನು ಬಹಳ ಪ್ರೀತಿ ಗೌರವಗಳಿಂದ ಬೆಳೆಸಿದರು. ರಾಷ್ಟ್ರಕೂಟರ ಅರಸು ಮನೆತನದ ನಾಲ್ಕನೆಯ ಗೋವಿಂದ ಒಂದನೆಯ ಕೃಷ್ಣ, ಕ್ರಿ. ಶ. 993ರಲ್ಲಿಯ ಹೈಹಯವಂಶದ ಶಿರಸ' ಕಲ್ಯಾಣ ಚಾಲುಕ್ಯರ ಸೋಮೇಶ್ವರ ಮೊದಲಾದವರು ಭೂಮಿ, ಸೀಮಿ, ದತ್ತಿಗಳನ್ನು ನೀಡಿದರೆಂಬುದಕ್ಕೆ ಇತಿಹಾಸವು ತನ್ನ ಪುಟಗಳನ್ನು ತೆರೆದಿಟ್ಟಿದೆ.

ಕಲ್ಯಾಣ ಚಾಲುಕ್ಯರ ವಿಕ್ರಮಾದಿತ್ಯನ ಆಸ್ಥಾನದ ಕಾಲಿದಾಸನೆಂಬ ಮಂತ್ರಿಯು (ಕ್ರಿ. ಶ. 1085) ನಾಗಾಯಿಯ ಘನತೆಗೆ ಪಾತ್ರರಾದವರಲ್ಲಿ ಅಗ್ರಗಣ್ಯನಂತೆ. ಆತನು ಇಲ್ಲಿ ಷಟ್‌ಶಾಸ್ತ್ರಗಳನ್ನು ಅಭ್ಯಾಸ ಮಾಡಲು ಅವಕಾಶ ಮಾಡಿಕೊಟ್ಟಿದ್ದನಂತೆ. ಅದಕ್ಕಾಗಿ ಬೇರೆ ಬೇರೆ ದೇಶಗಳಿಂದ ವಿದ್ಯಾರ್ಥಿಗಳು ಆಕರ್ಷಿತರಾಗಿ ಅಲ್ಲವೆ ವ್ಯಾಸಂಗಕ್ಕಾಗಿ ಬರುತ್ತಿದ್ದರಂತೆ. ಅವರಿಗೆಲ್ಲ ಅಲ್ಲಿ ಯೋಗ್ಯವಾದ ವಸತಿ ಸೌಕರ್ಯ, ಊಟ, ಉಡುಗೆಯ ಸೌಕರ್ಯಗಳನ್ನು ಒದಗಿಸಿಕೊಟ್ಟಿದಲ್ಲದೆ, ಪುಸ್ತಕಭಂಡಾರದ ಅನುಕೂಲತೆಯನ್ನೂ ಮಾಡಿಕೊಟ್ಟಿದ್ದನಂತೆ. ಹೀಗೆ ಶ್ರೇಷ್ಠವಾದ ಪುಸ್ತಕಭಂಡಾರವಿರುವ ಜ್ಞಾನಪೀಠವನ್ನು ನಿರ್ಮಿಸಿದವರಲ್ಲಿ ಸದ್ಯದಮಟ್ಟಿಗೆ ಕಾಳಿದಾಸನೇ ಮೊದಲಿಗನೆಂದು ಹೇಳಬೇಕಾಗಬಹುದು. ಈ ಮಾತಿಗೆ ಅಲ್ಲಿಯ ಒಂದು ಶಾಸನವು ಪ್ರಮಾಣವನ್ನು ನುಡಿಯುತ್ತದೆ. ಅದರಲ್ಲಿ ಕಾಳಿದಾಸನ ವ್ಯಕ್ತಿತ್ವವೇ ಒಡಮೂಡಿದಂತಿದೆ. "ಅವನು ಸಾಹಿತ್ಯದಲ್ಲಿ ಅಭಿರುಚಿಯುಳ್ಳವನು, ಸೈನ್ಯ ನಡೆಸುವುದರಲ್ಲಿ ನಿಷ್ಣಾತನು, ರಾಜಕಾರಣದಲ್ಲಿ ಬೃಹಸ್ಪತಿಯೂ, ಧೈರ್ಯದಲ್ಲಿ ಗರುಡನೂ ಆಗಿದ್ದು ಅಗ್ರಹಾರವನ್ನು ಸ್ಥಾಪಿಸಿದನೆಂದೂ, ಎರಡನೆಯ ಜಯಸಿಂಹನಿಂದ ಈ ಅಗ್ರಹಾರದ ಶಾಸನವನ್ನು ಮಾಡಿಸಿದನೆಂದೂ ತಿಳಿದು ಬರುತ್ತದೆ. ಅಲ್ಲದೆ ಇದು ಹಿಂದೆ ಕುಂತಳ ದೇಶದ ಪ್ರಾದೇಶಿಕ ರಾಜಧಾನಿಯಾಗಿತ್ತೆಂದೂ ಹೇಳುತ್ತಾರೆ. ಇಷ್ಟೇ ಅಲ್ಲ, ಇಲ್ಲಿ ನಾಗಾಯಿಯ ಎಲ್ಲಮ್ಮ ಅರ್ಥಾತ್ ನಾಗಲಾಂಬಿಕೆಯೆಂಬ ದೇವಿಯು ಇರುವ ಶಕ್ತಿಪೀಠವೂ ಇದೆ. ಅದಕ್ಕಾಗಿ ಅನೇಕ ಜನ ಭಕ್ತರು ದರ್ಶನಕ್ಕಾಗಿ ಬರುತ್ತಿರುತ್ತಾರೆ. ಆ ದೇವಾಲಯದ ಸುತ್ತುಮುತ್ತು ನೀರಿನ ಚಿಲುಮೆಗಳಿದ್ದು ನಿಸರ್ಗದ ಹಸಿರು ಕಣ್ಣಿಗೆ ಹಬ್ಬವನ್ನುಂಟು ಮಾಡುತ್ತದೆ. ಅಲ್ಲಿ ಮುಕ್ಕಾಗಿ ಬಿದ್ದಿರುವ ದೇವಾಲಯದ ಕಟ್ಟಡದ ಕಲ್ಲುಗಳು, ನಂದಿಯ ವಿಗ್ರಹಗಳು, ಜಿನಮೂರ್ತಿಗಳು, ಶಿಲಾಶಾಸನಗಳು ಗತವೈಭವನ್ನು ನೆನಪಿಸಿ ಕಣ್ಣುಗಳನ್ನು ತಂಪುಗೊಳಿಸುತ್ತವೆ. ಎಲ್ಲಮ್ಮನ ಮಂದಿರದ ಹತ್ತಿರವಿರುವ ನಂದಿಭಾವಿ ಮತ್ತು ಸಿಡುಲುಭಾವಿಗಳಲ್ಲಿ ನೀರು ಸದಾಕಾಲದಲ್ಲಿ ಒಂದೇ ಪಾತಳಿಯಲ್ಲಿದ್ದು ಕುಡಿಯಲು ಬಹು ಸಿಹಿ ಮತ್ತು ತಂಪು. ಈ ಪ್ರದೇಶದಲ್ಲಿಯೇ ಮತ್ತೊಂದು ಮಹತ್ವದ ಸ್ಥಳ 61 ಕಂಬಗಳ ದೇವಾಲಯ ಮತ್ತು ಅದರ ಆವಾರದಲ್ಲಿರುವ ಏಳು ಅಡಿ ಎತ್ತರದ

ಶಿಲಾಶಾಸನ. ಈ ಹಿನ್ನಲೆಯನ್ನೆಲ್ಲ ಪರಿಶೀಲಿಸಿದರೆ ನಾಗಾಯಿ ಪ್ರಾಚೀನ ಕಾಲದಿಂದಲೂ ಶ್ರೇಷ್ಠ ಗುರುಕುಲವಾಗಿ ಘಟಿಕಾಸ್ಥಾವಾಗಿ ಬೆಳೆದು ಬಂದಿದೆಯೆಂದು ಒಪ್ಪಬಹುದು.

ಇಂತಹ ಪರಂಪರೆಯಿರುವ ನಾಗಾಯಿಯಲ್ಲಿ ಭಾರತೀಯ ತತ್ವಜ್ಞಾನದ ವಿವಿಧ ಶಾಖೆಗಳ ಅಧ್ಯಯನ-ಅಧ್ಯಾಪನಗಳು ನಡೆಯುತ್ತಿದ್ದುವು ಎಂಬುದನ್ನು, ಶಾಸನದಲ್ಲಿ ಹೇಳಿರುವ ಕೆಳಗೆ ನಿರೂಪಿಸಿದ ಅಂಕಿಸಂಖ್ಯೆಗಳಿಂದ ಮನಗಾಣಬಹುದು.

| **ಉಪಾಧ್ಯಾಯರು ಕಲಿಸುತ್ತಿದ್ದ ವಿಷಯಗಳ** | **ಉಪಾಧ್ಯಾಯರ ಸಂಖ್ಯೆ** |
|---|---|
| 1. ಭಟ್ಟದರ್ಶನ. ನ್ಯಾಸ ಪ್ರಭಾಕರನ ವ್ಯಾಖ್ಯಾನ | 3 |
| 2. ವೇದವನ್ನು ಕಲಿಸುವವರು | 3 |
| 3. ಗ್ರಂಥಭಂಡಾರಿಗಳು | 1 |

| **ವಿದ್ಯಾರ್ಥಿಗಳು** | **ವಿದ್ಯಾರ್ಥಿಗಳ ಸಂಖ್ಯೆ** |
|---|---|
| 1. ವೇದಾಧ್ಯಾಯಿಗಳು | 200 |
| 2. ಶಾಸ್ತ್ರಾಧ್ಯಾಯಿಗಳು | 50 |
| 3. ಇತರರು | 2 |

ಈ ವಿದ್ಯಾಕ್ಷೇತ್ರಕ್ಕೆ ನೀಡಿದ 1,000 ಮತ್ತರ ಭೂಮಿಯ ಹಂಚಿಕೆಯು ಕೆಳಗಿನಂತೆ ಇತ್ತು.

35 ಮತ್ತರು ಭಟ್ಟದರ್ಶನ ವ್ಯಾಖ್ಯಾತೃವಿಗೆ
30 ಮತ್ತರು ನ್ಯಾಸ ವ್ಯಾಖ್ಯಾತೃವಿಗೆ
45 ಮತ್ತರು ಪ್ರಭಾಕರ ವ್ಯಾಖ್ಯಾತೃವಿಗೆ
30 ಮತ್ತರು ಗ್ರಂಥಭಂಡಾರಿಗೆ
30 ಮತ್ತರು ಘಟಿಕಾಪ್ರಹಾರಿಗೆ

ಉಳಿದ ಮತ್ತರು ದೇವಸ್ಥಾನದ ಜೀರ್ಣೋದ್ಧಾರ ಮತ್ತು ಇತರ ಸೇವಿಕಾ ವೃತ್ತಿಗಳಿಗಾಗಿ ?

ಇಂದಿಗೂ ಮೇಲಿನಂತೆ ಇತಿಹಾಸದ ಲೆಕ್ಕ ಪತ್ರವನ್ನು ಹೊತ್ತು ನಿಂತಿರುವ 61 ಕಂಬಗಳ ಮಧುಸೂದನ ದೇವಾಲಯವು ನಮ್ಮನ್ನು ಪ್ರಾಚೀನ ಕಾಲದ ನಾಗರಿಕರನ್ನಾಗಿ ಮಾಡುತ್ತದೆ.



'ಬ್ರಹ್ಮ ವೇದ ಬ್ರಹ್ಮೈವ ಭವತಿ' (ಮುಂ. ೩-೨-೯)-'ಬ್ರಹ್ಮವನ್ನರಿತವನು ಬ್ರಹ್ಮವೇ ಆಗುವನು' ಮುಂತಾದ ಶ್ರುತಿವಾಕ್ಯಗಳಿಂದ ಬ್ರಹ್ಮಭಾವದಲ್ಲಿ ಅವಸ್ಥಿತಿಯೇ ಮೋಕ್ಷವೆಂದು ಗೊತ್ತಾಗುತ್ತದೆ.

ಜೀವನ್ಮುಕ್ತಿ: ಅದ್ವೈತದರ್ಶನವು ಜೀವನ್ಮುಕ್ತಿಯನ್ನು ಒಪ್ಪುತ್ತದೆ ಎಂಬುದೊಂದು ವಿಶೇಷ. ದೇಹವಿರುವಾಗಲೇ ಜೀವನು ಮುಕ್ತನಾಗಬಹುದು. ಜ್ಞಾನವೇ ತರಣೋಪಾಯವಾದ್ದರಿಂದ ಬ್ರಹ್ಮಸಾಕ್ಷಾತ್ಕಾರವು ಯಾರಿಗಾಗುವುದೋ ಅವನು ಮುಕ್ತನೇ. ದೇಹವು ಪ್ರಾರಬ್ಧಕರ್ಮವಶದಿಂದ ಉಳಿದಿರುತ್ತದೆ. 'ಕ್ಷೀಯಂತೇ ಚಾಸ್ಯ ಕರ್ಮಾಣಿ ತಸ್ಮಿನ್ ದೃಷ್ಟೇ ಪರಾವರೇ' ಎಂದು ಜ್ಞಾನದಿಂದ ಕರ್ಮಕ್ಷಯವನ್ನು ಹೇಳಿದ್ದರೂ ಪ್ರಾರಬ್ಧಕರ್ಮ ಒಂದನ್ನು ಬಿಟ್ಟು ಉಳಿದ ಕರ್ಮಗಳು ನಶಿಸುತ್ತವೆ, ಎಂದು ವ್ಯವಸ್ಥೆ ಮಾಡಲಾಗಿದೆ. ಪ್ರಾರಬ್ಧಕರ್ಮಭೋಗವೂ ಅನ್ಯರ ದೃಷ್ಟಿಯಿಂದಲೇ ಹೊರತು ಜೀವನ್ಮುಕ್ತನ ದೃಷ್ಟಿಯಿಂದಲ್ಲ. ಜೀವನ್ಮುಕ್ತಿಯನ್ನು ಒಪ್ಪುವುದರಿಂದಲೇ ಗುರುಶಿಷ್ಯ ಪರಂಪರೆಯಿಂದ ಸಂಪ್ರದಾಯವು ಮುಂದುವರಿಯುತ್ತದೆ. ಜೀವನ್ಮುಕ್ತಿಯನ್ನು ಒಪ್ಪದಿದ್ದರೆ ಬದುಕಿದವನು ಜ್ಞಾನಿಯೇ ಅಲ್ಲವೆನ್ನಬೇಕಾದೀತು. ಆತನಿಗೆ ಉಪದೇಶಾಧಿಕಾರವೇ ಇಲ್ಲದೆ ಹೋದೀತು. ಈ ಕೆಳಗಣ ವಾಕ್ಯಗಳು ಜೀವನ್ಮುಕ್ತಿಗೆ ಪ್ರಮಾಣ.

೧. ಅತ್ರ ಬ್ರಹ್ಮಸಮಶ್ನುತೇ (ಕಠ. ೬-೧೪) ಇಲ್ಲಿ ಈ ದೇಹದಲ್ಲಿ ಬ್ರಹ್ಮವನ್ನು ಸೇರುತ್ತಾನೆ. ೨. ವಿದ್ವಾನ್ ಅಮೃತ ಇಹ ಭವತಿ (ಪು. ಸೂ.) ಬ್ರಹ್ಮಜ್ಞಾನಿಯು ಇಲ್ಲಿಯೆ ಅಮೃತ (ಮುಕ್ತ) ನಾಗುತ್ತಾನೆ. ೩. ಯಃ ಸದಾ ಮುಕ್ತ ಏವ ಸಃ (ಗೀತಾ ೫-೨೮) ಇಚ್ಛಾಭಯಕ್ರೋಧರಹಿತನಾದ ಮುನಿಯು ಮುಕ್ತನೆ ಸರಿ. ೪. ಇಹೈವ ತೈರ್ಜಿತಃ ಸರ್ಗೋ ಯೇಷಾಂ ಸಾಮ್ಯೇಸ್ಥಿತಂ ಮನಃ (ಗೀತಾ. ೫-೧೯) ಯಾರ ಮನಸ್ಸು ಸಮಭಾವವೆನಿಸಿದ ಬ್ರಹ್ಮದಲ್ಲಿ ನೆಲೆಸಿದೆಯೋ ಅವರು ಇಲ್ಲಿಯೇ (ಬದುಕಿರುವಾಗಲೇ) ಜನ್ಮವನ್ನು ಗೆದ್ದಿರುತ್ತಾರೆ.

ಮೋಕ್ಷಸಾಧನ: ಮೋಕ್ಷವು ನಿತ್ಯಸಿದ್ಧವಾದುದು. ಅದನ್ನು ಹೊಸದಾಗಿ ಸಾಧಿಸಬೇಕಾದದ್ದಿಲ್ಲ. ಮೋಕ್ಷವು ನಿತ್ಯಸಿದ್ಧವಾಗಿರುವ ಬ್ರಹ್ಮಾತ್ಮಸ್ವರೂಪವೇ. ಬಂಧವು ಅವಿದ್ಯಾಕೃತವಾದ್ದರಿಂದ ಅವಿದ್ಯಾನಿವೃತ್ತಿ ಸಾಧ್ಯ. ಅವಿದ್ಯೆಯೆಂದರೆ ಅಜ್ಞಾನ. ಅದರ ನಿವೃತ್ತಿ ಜ್ಞಾನದಿಂದ ಮಾತ್ರ.

ತಮೇವ ವಿದಿತ್ವಾ ಅತಿಮೃತ್ಯುಮೇತಿ ।
ನಾನ್ಯಃ ಪಂಥಾ ವಿದ್ಯತೇಽಯನಾಯ ॥

'ಆತ್ಮವನ್ನು ತಿಳಿದೇ ಮೃತ್ಯುವಾದ ಸಂಸಾರವನ್ನು ದಾಟುತ್ತಾನೆ. ಸಂಸಾರವನ್ನು ದಾಟಲು ಬೇರೆ ಮಾರ್ಗವಿಲ್ಲ' ಆದ್ದರಿಂದ ಮೋಕ್ಷಕ್ಕೆ ಜ್ಞಾನವು ಸಾಧನವೆಂದು

ಪರ್ಯಾಯವಾಗಿ ಹೇಳಿದ್ದಂತಾಗುತ್ತದೆ. ಸಮ್ಯಗ್‌ಜ್ಞಾನ ಉದಯಿಸಬೇಕಾದರೆ ಹಲವು ಸಾಧನೆಗಳನ್ನು ಅವಲಂಬಿಸುವುದು ಅವಶ್ಯಕ. 'ಶಮದಮಾದಿ ಸಂಸ್ಕೃತಂ ಮನಃ ಆತ್ಮದರ್ಶನೇ ಕರಣಂ' ಎಂದು ಶ್ರೀ ಶಂಕರಾಚಾರ್ಯರು ಹೇಳಿದ್ದಾರೆ. ಶಮದಮಾದಿಗಳಿಂದ ಸಂಸ್ಕಾರ ಹೊಂದಿದ ಮನಸ್ಸು ಆತ್ಮಜ್ಞಾನಕ್ಕೆ ಸಾಧನ. ಆದ್ದರಿಂದ ಹಿಂದೆ ವಿಚಾರ ಮಾರ್ಗದಲ್ಲಿ ಹೇಳಿದ ಸಾಧನ ಚತುಷ್ಟಯವನ್ನು ಇಲ್ಲಿ ಮೋಕ್ಷ ಸಾಧನವೆಂದು ಪರಿಗಣಿಸಬೇಕು.

**ಕರ್ಮ :** ಯಾವನಿಗೆ ಬ್ರಹ್ಮಜ್ಞಾನವಾಗಿಲ್ಲವೋ ಆತನು ಶಾಸ್ತ್ರೋಕ್ತವಾದ ಕರ್ಮವನ್ನು ಮಾಡಲೇಬೇಕು. ನಿಷಿದ್ಧವಾದದ್ದನ್ನು ವರ್ಜಿಸಲೇಬೇಕು. ಫಲಕಾಮನೆಯಿಂದ ಮಾಡುವ ಕರ್ಮ ಮುಮುಕ್ಷುವಿಗೆ ಹಿತಕರವಲ್ಲ. ಅದು ಮತ್ತೆ ಬಂಧಕವೇ ಆಗುತ್ತದೆ. ಆದ್ದರಿಂದ ಭಗವದ್ಗೀತೆಯಲ್ಲಿ ನಿಷ್ಕಾಮಕರ್ಮವನ್ನು ಬೋಧಿಸಿದೆ. ಶಾಸ್ತ್ರೋಕ್ತವಾದ ಕರ್ಮವನ್ನು ಫಲಾಪೇಕ್ಷೆ ಇಲ್ಲದೆ ಮಾಡಿದಾಗ ಅದು ಚಿತ್ತಶುದ್ಧಿಗೆ ಕಾರಣವಾಗುತ್ತದೆ. ಹೀಗೆ ಪರಂಪರೆಯಿಂದ ಕರ್ಮವು ಜ್ಞಾನಕ್ಕೆ ಉಪಯುಕ್ತವಾಗುತ್ತದೆ.

**ಭಕ್ತಿ :** ಅದ್ವೈತದರ್ಶನದಲ್ಲಿ ಭಕ್ತಿಗೆ ಪ್ರಮುಖಸ್ಥಾನ ಉಂಟು. ಇದನ್ನೇ ಸಗುಣೋಪಾಸನೆ ಎನ್ನುತ್ತಾರೆ. ಉಪನಿಷತ್ತುಗಳಲ್ಲಿಯೂ ಭಗವದ್ಗೀತೆಯಲ್ಲಿಯೂ ಇದನ್ನು ವಿಶೇಷವಾಗಿ ಸ್ತುತಿಸಿದೆ. ಭಕ್ತಿಯಿಂದ ಮನಸ್ಸಿನ ಕಶ್ಮಲಗಳು ತೊಡೆದು ಹೋಗುತ್ತವೆ. ಈಶ್ವರನು ಪ್ರಸನ್ನನಾಗಿ ಸತ್ಸಂಗವನ್ನು ಸದ್ಗುರು ಲಾಭವನ್ನೂ ಅನುಗ್ರಹಿಸುತ್ತಾನೆ. ನಿಷ್ಕಾಮಕರ್ಮದಂತೆ ಭಕ್ತಿಯೂ ಚಿತ್ತಶುದ್ಧಿಗೆ ಅತ್ಯಂತ ಸಹಕಾರಿ.

**ಪ್ರಮಾಣ :** ಅದ್ವೈತದರ್ಶನಕ್ಕೆ ಅನುಗುಣವಾದ ಕೆಲವು ಪ್ರಮಾಣವಾಕ್ಯಗಳನ್ನು ಇಲ್ಲಿ ಉದಾಹರಿಸಲಾಗಿದೆ—

೧. ಏಕಮೇವಾದ್ವಿತೀಯಂ ಬ್ರಹ್ಮ (ಛಾಂ. ೬-೨-೨) ಬ್ರಹ್ಮವು ಒಂದೇ ಆಗಿ ದ್ವಿತೀಯ ವಸ್ತುರಹಿತವಾಗಿದೆ. ೨. ಸತ್ಯಂ ಜ್ಞಾನಮನಂತಂ ಬ್ರಹ್ಮ (ತೈ. ೨-೧) ಸತ್ಯವೂ ಜ್ಞಾನಸ್ವರೂಪವೂ ಅನಂತವೂ ಆದದ್ದು ಬ್ರಹ್ಮ. ೩. ಆನಂದೋ ಬ್ರಹ್ಮೇತಿ ವ್ಯಜಾನಾತ್ (ತೈ. ೩-೧) ಆನಂದವೇ ಬ್ರಹ್ಮವೆಂದು (ಭೃಗು) ತಿಳಿದುಕೊಂಡನು. ೪. ಸ ತ್ವಮೇವ ತ್ವಮೇವ ತತ್ (ಕೈವಲ್ಯ ೧.೧೬) ಬ್ರಹ್ಮವು ನೀನೇ, ನೀನೇ ಬ್ರಹ್ಮ. ೫. ತತ್ರಕೋ ಮೋಹಃ ಕಃ ಶೋಕ ಏಕತ್ವಮನುಪಶ್ಯತಃ (ಈಶ. ೭) ಏಕತ್ವವನ್ನು ಕಾಣತಕ್ಕವನಿಗೆ ಶೋಕವೆಲ್ಲಿದೆ? ಮೋಹವೆಲ್ಲಿದೆ? ೬. ಮೃತ್ಯೋಃ ಸ ಮೃತ್ಯುಮಾಪ್ನೋತಿಯ ಇಹ ನಾನೇವ ಪಶ್ಯತಿ (ಕಾ.೪-೧೦) ಯಾರು ಇಲ್ಲಿ ಅನೇಕವಸ್ತುವಿದೆಯೆಂದು ತಿಳಿಯುವನೋ ಅವನು ಮೃತ್ಯುವಿನಿಂದ ಮೃತ್ಯುವಿನ ಬಾಯಿಗೆ ಇಳಿಯುವನು. ೭. ಸರ್ವಂಖಲ್ವಿದಂ ಬ್ರಹ್ಮ (ಛಾ. ೩-೧೪-೧) ಇದೆಲ್ಲವೂ ಬ್ರಹ್ಮವೇ ಸರಿ. ೮. ಯ ಏವಂ ವೇದಾಹಂ ಬ್ರಹ್ಮಾಸ್ಮೀತಿ ಸ ಇದಂ ಸರ್ವಂ ಭವತಿ (ಬೃ. ೧-೪-೧೦) ನಾನು ಬ್ರಹ್ಮನಾಗಿದ್ದೇನೆ, ಎಂದು ಯಾವಾತನು ತಿಳಿಯುವನೋ ಅವನು ಈ ಸರ್ವವೂ (ಬ್ರಹ್ಮ)ಆಗಿಬಿಡುತ್ತಾನೆ.



**ಉಪಸಂಹಾರ :** ಹೀಗೆ ಅದ್ವೈತವನ್ನು ಬೋಧಿಸುವ ಮತ್ತು ದ್ವೈತವನ್ನು ನಿಷೇಧಿಸುವ ಶ್ರುತಿವಾಕ್ಯಗಳನ್ನು ಹೇರಳವಾಗಿ ಉದಾಹರಿಸಬಹುದು, ಅದ್ವೈತವನ್ನು ನಿರಾಕರಿಸುವ ಶ್ರುತಿವಾಕ್ಯವು ನಮಗೆ ದೊರೆತಿಲ್ಲವೆಂಬುದೊಂದು ವಿಶೇಷ. ಆದರೆ ದ್ವೈತಮಾರ್ಗದಲ್ಲಿ ನಿಂತು ಅರ್ಥಮಾಡಬೇಕಾದ ದ್ವೈತಸೂಚಕವಾದ 'ದ್ವಾಸುಪರ್ಣಾ ಸಯುಜಾ ಸಖಾಯಾ—' ಮುಂತಾದ ಶ್ರುತಿವಾಕ್ಯಗಳು ಉಂಟು. ಇವುಗಳ ಸಮನ್ವಯ ಅದ್ವೈತದರ್ಶನಕ್ಕೆ ಕಠಿಣವಲ್ಲ, ಜ್ಞಾನೋದಯಕ್ಕೆ ಪೂರ್ವದಲ್ಲಿ ಕರ್ಮ ಮತ್ತು ಸಗುಣೋಪಾಸನೆಗಳನ್ನು ಈ ದರ್ಶನವು ಅಂಗೀಕರಿಸಿ ಔಪಾಧಿಕವಾಗಿ ಜೀವೇಶ್ವರಭೇದವನ್ನು ಒಪ್ಪಿದೆ. ಆದ್ದರಿಂದ ದ್ವೈತಬೋಧಕ ಶ್ರುತಿಗಳನ್ನು ಸಮಂಜಸವಾಗಿ ಸಮನ್ವಯಗೊಳಿಸಲು ಸಾಧ್ಯವಾಗಿದೆ. ಇದು ಯಾವದರ್ಶನಕ್ಕೂ ವಿರುದ್ಧವಾಗದಂತೆ ಎಲ್ಲ ದರ್ಶನಗಳ ಸಾರವನ್ನು ಅಧಿಕಾರಿ ಭೇದದಿಂದ ತನ್ನಲ್ಲಿ ಅಳವಡಿಸಿಕೊಂಡಿದೆ.

ಆತ್ಮನಲ್ಲಿ ಸ್ತ್ರೀ, ಪುರುಷ–ಎಂಬ ಭೇದವನ್ನಾಗಲಿ ಉತ್ತಮ, ಮಧ್ಯಮ, ಕನಿಷ್ಠ ಎಂಬ ತಾರತಮ್ಯವನ್ನಾಗಲಿ ಈ ದರ್ಶನವು ಒಪ್ಪುವುದಿಲ್ಲ. ಮೋಕ್ಷಸ್ಥಿತಿಯಲ್ಲಿ ಯಾವ ತರತಮಭಾವವೂ ಇಲ್ಲ. ಸನ್ಮಾರ್ಗದಲ್ಲಿ ಪ್ರಯತ್ನಿಸುವ ಸಕಲ ಜೀವರಿಗೂ ಮೋಕ್ಷದ ಬಾಗಿಲು ತೆರೆದಿದೆ.

ಅದ್ವೈತದರ್ಶನವು ಏಕೇಶ್ವರವಾದವನ್ನು ಪುರಸ್ಕರಿಸುತ್ತದೆ. ಈಶ್ವರನು ನಿರಾಕಾರನಾದರೂ ನರಾಕಾರನೂ ಆಗಬಲ್ಲ, ಜಗದಾಕಾರನೂ ಆಗಬಲ್ಲ. ಮಾಯಿಕವಾದ ದೇಹದಿಂದ ಅವನು ಸ್ತ್ರೀದೇವತೆಯೂ ಹೌದು; ಪುರುಷದೇವತೆಯೂ ಹೌದು. ಬ್ರಹ್ಮ, ವಿಷ್ಣು, ಶಿವ–ಮುಂತಾದವರೆಲ್ಲರೂ ಭಕ್ತರು ಕಲ್ಪಿಸಿಕೊಂಡ ಸಗುಣಮೂರ್ತಿಗಳು. ಸಗುಣೋಪಾಸನೆ ನಿರ್ಗುಣೋಪಾಸನೆಗೆ ಮೊದಲನೆಯ ಹಂತವೆಂದು ಈ ದರ್ಶನವು ತಿಳಿಯುತ್ತದೆ.

ಮಹಾತ್ಮರು ಬೋಧಿಸಿದ ಎಲ್ಲ ಮತಗಳಿಗೂ ಇಲ್ಲಿ ಪುರಸ್ಕಾರವುಂಟು. ಅದೆಲ್ಲವೂ ಶ್ರೇಯಸ್ಕರವೇ, ಆದರೆ ಅಧಿಕಾರಭೇದದಿಂದ ಅದು ವ್ಯವಸ್ಥಿತವಾಗುತ್ತದೆ. ಮತೀಯ ಭಾವನೆಗಳಿಗೂ ಮತೀಯ ಲಾಂಛನಗಳಿಗೂ ಈ ದರ್ಶನದಲ್ಲಿ ಪುರಸ್ಕಾರವೂ ಇಲ್ಲ, ತಿರಸ್ಕಾರವೂ ಇಲ್ಲ. ಸೋಪಾನಕ್ರಮದಿಂದ ಉತ್ತಮಾಧಿಕಾರಿಗೆ ಗಮ್ಯವಾದುದು ಅದ್ವೈತವೇ.

# ಹೈದರಾಬಾದು ಕರ್ನಾಟಕದ ಪ್ರಾಚೀನ ಗುರುಕುಲಗಳು

—ಪ್ರೊ. ಡಿ. ವಸಂತ ಕುಷ್ಟಗಿ

ಮನುಷ್ಯನು ಬೆಳೆದಿದ್ದಾನೆಂಬುದನ್ನು ಅವನ ಎತ್ತರ ಮತ್ತು ಗಾತ್ರದ ಮೇಲೆ ಗುರುತಿಸುವುದಲ್ಲ. ಅದನ್ನು ಅವನ ಹೃದಯವಂತಿಕೆ ಮತ್ತು ಬುದ್ಧಿವಂತಿಕೆಗಳ ಮೇಲೆ ಗುರುತಿಸಬೇಕಾದುದು ಸಂಸ್ಕೃತಿಯ ಲಕ್ಷಣ. ಇದನ್ನು ಕರ್ನಾಟಕ ಜನತೆ ಬಹು ಪ್ರಾಚೀನಕಾಲದಿಂದಲೇ ವಿದ್ಯೆಗೆ ಮಹತ್ವವನ್ನು ಕೊಟ್ಟು ಶಿಕ್ಷಣ ಕೇಂದ್ರಗಳನ್ನು ನಿರ್ಮಿಸಿಕೊಂಡು ಪಾಂಡಿತ್ಯವನ್ನು ಈ ಜನತೆ ಸಂಪಾದನೆ ಮಾಡಿತು. ಇಲ್ಲಿ ಪಾಂಡಿತ್ಯವೆಂದರೆ ಕೇವಲ ಪುಸ್ತಕ ಜ್ಞಾನವೆಂದು ಅರ್ಥ ಮಾಡಕೂಡದು. ಜ್ಞಾನಸಂಗ್ರಹದ ಜೊತೆಗೆ ಲೌಕಿಕ ವ್ಯವಹಾರ ಚಾತುರ್ಯವೂ ಅದರಲ್ಲಿ ಸೇರಿರಬೇಕಾದುದು ಆಗತ್ಯವೆಂದು ಭಾವಿಸಬೇಕಾಗುತ್ತದೆ. ಕೆಲವು ಸಲ ಅಕ್ಷರಜ್ಞಾನವಿಲ್ಲದಿದ್ದರೂ ನಡೆಯುತ್ತದೆ. ಆದರೆ ಲೌಕಿಕ ಜ್ಞಾನವು ಅತ್ಯವಶ್ಯ ಬೇಕಾಗುತ್ತದೆ. ಇಂತಹ ಲೌಕಿಕ ಜ್ಞಾನದಲ್ಲಿ ಹೃದಯವಿಕಾಸ ಮತ್ತು ಮನಸ್ಸಿನ ಪಕ್ವತೆಗಳು ಮಹತ್ವದ ಪಾತ್ರವನ್ನು ವಹಿಸಿರುತ್ತವೆ. ಬಹುಷಃ ಇದನ್ನು ಕನ್ನಡಿಗರಲ್ಲಿ ಗುರುತಿಸಿ ನೃಪತುಂಗನ ಕಾಲದ ಕವಿರಾಜ ಮಾರ್ಗದಲ್ಲಿ,

"ಪದನರಿದು ನುಡಿಯಲುಂ ನುಡಿ
ದುದನರಿದಾರಯಲುಮಾರ್ಪರಾ ನಾಡವರ್ಗಳ್
ಚದುರರ್ ನಿಜದಿಂ ಕುರಿತೋ
ದದೆಯುಂ ಕಾವ್ಯಪ್ರಯೋಗ ಪರಿಣತ ಮತಿಗಳ್ ||
ಕುರಿತವರಲ್ಲದೆ ಮತ್ತಂ
ಪೆಱರುಂ ತಂತಮ್ಮ ನುಡಿಯೊಳೆಲ್ಲರ್ ಜಾಣರ್
ಕಿರುವಕ್ಕಳು ಮಾಮೂಗರು
ಮರಿ ಪಲ್ಕುರಿವರ್ ವಿವೇಕಮಂ ಮಾತುಗಳಂ"

ಎಂಬಂತಹ ಪ್ರಶಸ್ತಿಯ ಮಾತುಗಳು ಕನ್ನಡಿಗರ ಬಗೆಗೆ ಉಕ್ತವಾಗಿರುವುದನ್ನು ಗಮನಿಸಬಹುದಾಗಿದೆ.

ಇತಿಹಾಸವನ್ನು ತೆರೆದು ನೋಡಿದಾಗ ಕರ್ನಾಟಕದಲ್ಲಿಯ ದೇವಾಲಯ, ಮಠ, ಬ್ರಹ್ಮಪುರಿ, ಅಗ್ರಹಾರ ಇವುಗಳು ಪ್ರೌಢಶಿಕ್ಷಣದ ಕೇಂದ್ರಗಳಾಗಿದ್ದವು.



ಕುಕನೂರು, ರಾಯಚೂರು ಜಿಲ್ಲೆಯ ಯಲಬುರಗಿ ತಾಲ್ಲೂಕಿಗೆ ಸೇರಿದ ಪ್ರದೇಶ. ಅಲ್ಲಿಯೂ ಕೂಡ ನಾವು ಪ್ರಾಚೀನ ಕಾಲದ ಗುರುಕುಲದ ನೆಲೆಬೆಲೆಗಳನ್ನು ಗುರುತಿಸಬಹುದು. ಇದಕ್ಕೆ ಆಧಾರ ಶಾಸನಗಳು, ಐತಿಹ್ಯಗಳು. ಈ ಕುಕನೂರು ಪುರಾಣಗಳ ಕಾಲದಿಂದಲೂ ಖ್ಯಾತಿವೆತ್ತ ಊರು. ಏಕೆಂದರೆ, ಇದೇ ಹಿಂದೆ ಕುಂತಳ ನಗರವಾಗಿದ್ದು ಚಂದ್ರಹಾಸನ ಸುಂದರವಾದ ವ್ಯಕ್ತಿತ್ವವು ಮೂಡಿ ಬರುವುದಕ್ಕೆ ಕಾರಣೀಭೂತವಾದ ಹೆಗ್ಗಳಿಕೆಯ ಸ್ಥಳವೆಂದು ಐತಿಹ್ಯಪಡೆದಿದ್ದು ಇದರ ಸಮೀಪದಲ್ಲಿರುವ ಶೃಂಗೇರ ತೋಟದಲ್ಲಿಯೇ ದುಷ್ಟಬುದ್ಧಿಯ ಮಗಳಾದ ವಿಷಯೆಯನ್ನು ಚಂದ್ರಹಾಸನು ಮೊತ್ತಮೊದಲು ಸಂಧಿಸಿದ್ದು. ಕಲಬುರಗಿ ಜಿಲ್ಲೆಯ ಸುರಪುರದ ಬಳಿಯಿರುವ ದೇವಪುರದ ಲಕ್ಷ್ಮೀಶ ಕವಿಯು ಇದನ್ನೇ ತನ್ನ ಜೈಮಿನಿ ಭಾರತದಲ್ಲಿ ಕುಂತಲಪುರವೆಂದು ಕರೆದು ಚಂದ್ರಹಾಸನ ಕತೆಯನ್ನು ಸೊಗಸಾಗಿ ಬಿತ್ತರಿಸಿದ್ದಾನೆ. ಇದು ಪುರಾಣ ವೈಭವವನ್ನು ಬಿತ್ತರಿಸಿದರೆ ಅಲ್ಲಿ ಇತಿಹಾಸಕಾಲದ ವೈಭವಕ್ಕೂ ಚ್ಯುತಿಯಿಲ್ಲದ ಗುರುತುಗಳಿವೆ. ಏಕೆಂದರೆ ಈಗ ಅಲ್ಲಿ ಚಾಲುಕ್ಯ ಶಿಲ್ಪ ಮಾದರಿಯ 8 ನೆಯ ಶತಮಾನದಿಂದ 13 ನೆಯ ಶತಮಾನದವರೆಗಿನ ಬೆಳವಣಿಗೆಯ ಶಿಲ್ಪಕಲೆಯ ಅವಶೇಷಗಳನ್ನು ಬಿತ್ತರಿಸುವ ದೇಗುಲಗಳನ್ನು ಕಾಣಬಹುದು. ಇವುಗಳಲ್ಲದೆ ಇನ್ನೂ ಚೆನ್ನಾಗಿ ಹಳೆಯ ಸೊಗಸನ್ನು ಎತ್ತಿಹಿಡಿದು ಸುಂದರವಾಗಿ ನಿಂತಿರುವ ಕಲ್ಲೇಶ್ವರ ಮತ್ತು ಮಲ್ಲಿಕಾರ್ಜುನ ದೇವಾಲಯಗಳನ್ನು ನೋಡಬಹುದು. ಅದರಂತೆ ಮಹಾಮಾಯಿಯ ಮಂದಿರವೂ ಕೂಡ ಇಲ್ಲಿ ಶಿಲ್ಪಕಲೆಗೆ ಮಾದರಿಯಾಗಿ ಅಚ್ಚಳಿಯದೇ ತನ್ನ ಆರಾಧಕರನ್ನು ಬರಮಾಡಿಕೊಳ್ಳುತ್ತಿದೆ. ಇಂತಹ ಪರಂಪರೆಯಿರುವ ಈ ಊರಿನಲ್ಲಿ ಹಿಂದೆ ಗುರುಕುಲವಿದ್ದು ವಿದ್ಯಾದಾನವನ್ನು ಮಾಡಿದ ಸಂಗತಿಗೆ ಭಿನ್ನಾಭಿಪ್ರಾಯವೇ ಇಲ್ಲ. ಏಕೆಂದರೆ ಅಲ್ಲಿ ಇಂದಿನ ರೀತಿಯಲ್ಲಿ ಶಿಕ್ಷಣ ಪ್ರಧಾನ ಮಾಡುತ್ತಿರುವ ವಿದ್ಯಾನಂದ ಗುರುಕುಲವೆಂಬ ಶಿಕ್ಷಣ ಸಂಸ್ಥೆಯು ಹಿಂದಿನ ಪರಂಪರೆಯ ನೆನಪನ್ನು ತಂದುಕೊಡುವಲ್ಲಿ ಸಾರ್ಥಕವಾದ ಹೆಸರನ್ನು ಪಡೆದಿದೆ.

ಬಹಳ ಹಿಂದೆ ಈಗಿನ ಕುಕನೂರನ್ನು, ಕುಕನೂರು–30 ಎಂದು ಕರೆಯುತ್ತಿದ್ದರು. ಅದು ಆಗ ಬೆಳವಲ–300 ಪ್ರದೇಶದ ಮುಖ್ಯ ಪಟ್ಟಣಗಳಲ್ಲೊಂದಾಗಿತ್ತು. ಆ ಸಮಯಕ್ಕಾಗಲೇ ಅಲ್ಲಿ ಪ್ರಮುಖವಾದ ಅಗ್ರಹಾರವೆಂದು ಸ್ಥಾಪನೆಯಾಗಿ ಸುತ್ತಲಿನ ಪ್ರದೇಶಕ್ಕೆ ಜ್ಞಾನ ಪ್ರಧಾನ ಮಾಡುತ್ತಿತ್ತು. ಕ್ರಿ. ಶ. 1183 ರ ತಾಮ್ರಶಾಸನದ ಪ್ರಕಾರ ಅಲ್ಲಿ ಒಂದು ಸಾವಿರ ಮಹಾಜನರು ಆಶ್ರಯವನ್ನು ಪಡೆದಿದ್ದರೆಂದೂ ಶ್ರುತಪಡಿಸುತ್ತದೆ. ಅಲ್ಲದೆ ಕಳಚೂರ್ಯರ ಸಂಕಮದೇವ, ಬಿಜ್ಜಳ, ಕಲ್ಯಾಣ ಚಾಲುಕ್ಯರ ಭೂಲೋಕಮಲ್ಲ ಮೊದಲಾದವರ ಕಾಲದ ಶಾಸನಗಳು ಕುಕನೂರು ಅರ್ಥಪೂರ್ಣವಾಗಿಯೂ ಜಾಗೃತವಾದ ಗುರುಕುಲ, ವಿದ್ಯಾಕೇಂದ್ರ,

(46 ನೇ ಪುಟ ನೋಡಿ)

# ಜನಹಿತ ಸಾಧನೆ ವಚನ ಪಾಲನೆ

**ಜನತೆಗಿತ್ತ ವಚನ ಪಾಲನೆಗಾಗಿ ಜನತೆಯು ಆಶೋತ್ತರಗಳ ಈಡೇರಿಕೆಗಾಗಿ ಕಳೆದ ಏಳು ತಿಂಗಳ ಅವಧಿಯಲ್ಲಿ ಕರ್ನಾಟಕ ಸರ್ಕಾರ ಇಟ್ಟ ಹೆಜ್ಜೆ ದಿಟ್ಟ; ತಳೆದ ನಿಲುವು ಅಚಲ.**

**ಅಧಿಕಾರ ವಿಕೇಂದ್ರೀಕರಣ:** ಪುರಸಭೆ ನಗರಸಭೆಗಳ ಚುನಾವಣೆ. ಹದಿನೆಂಟು ವರ್ಷ ತುಂಬಿದವರಿಂದಲೂ ಮತ ಚಲಾವಣೆ. ಮಹಿಳೆಯರಿಗೆ ಸೂಕ್ತ ಪ್ರಾತಿನಿಧ್ಯ. ಇದು ಅಧಿಕಾರ ವಿಕೇಂದ್ರೀಕರಣದತ್ತ ಹೊಸ ಸರ್ಕಾರ ಇಟ್ಟ ದಿಟ್ಟ ಹೆಜ್ಜೆ–ಜತತೆಗಿತ್ತ ವಚನ ಪಾಲನೆ.

**ಕನ್ನಡಕ್ಕೆ ಅಗ್ರಸ್ಥಾನ:** ಗೋಕಾಕ ಸಮಿತಿಯ ವರದಿಯಂತೆ ಕನ್ನಡವನ್ನು ಏಕೈಕ ಪ್ರಥಮ ಭಾಷೆಯನ್ನಾಗಿ ಮಾಡುವುದಕ್ಕೆ ಸರ್ಕಾರ ಈಗಾಗಲೇ ಮಹತ್ವಪೂರ್ಣವಾದ ಕ್ರಮಗಳನ್ನು ಕೈಗೊಂಡಿದೆ. ಕನ್ನಡೇತರ ಶಾಲೆಗಳಲ್ಲಿ ಕಡ್ಡಾಯವಾಗಿ ಕನ್ನಡ ಬೋಧನೆ. ಕನ್ನಡ ಬೋಧಿಸಲು ಉಪಾಧ್ಯಾಯರ ನೇಮಕಾತಿ.

**ಆಡಳಿತದಲ್ಲಿ ಕನ್ನಡ:** ಆಡಳಿತ ಕ್ಷೇತ್ರದಲ್ಲೂ ಕಳೆದ ಫೆಬ್ರವರಿ 15 ರಿಂದ ಕನ್ನಡ ಬಳಕೆ ಕಡ್ಡಾಯ. ಕನ್ನಡ ಬಳಕೆ ಆಗುತ್ತಿದೆಯೇ ಎಂಬುದನ್ನು ಪರಿಶೀಲಿಸಿ, ಸಮಸ್ಯೆಗಳಿದ್ದರೆ ಸಲಹೆ ಸೂಚಿಸಲು ಕಾವಲು ಸಮಿತಿ.

**ರೈತರಿಗೆ ರಿಯಾಯಿತಿ:** ಅತ್ಯಲ್ಪ ಅವಧಿಯಲ್ಲಿ ರೈತ ಸಮುದಾಯಕ್ಕೆ 81 ಕೋಟಿ ರೂಪಾಯಿಯ ರಿಯಾಯಿತಿ ಸೌಲಭ್ಯ. 88 ಕೋಟಿ ರೂಪಾಯಿಗಳ ಸರ್ಕಾರಿ ಸಾಲಗಳ ಮನ್ನಾ, ಸಕಾಲದಲ್ಲಿ ಸಹಕಾರಿ ಸಾಲ ಮರುಪಾವತಿ ಮಾಡಿದವರಿಗೆ 28 ಕೋಟಿ ರೂಪಾಯಿ ಬಡ್ಡಿ ರಿಯಾಯಿತಿ, ವಿಫಲಗೊಂಡ ನೀರಾವರಿ ಕೊಳವೆ ಬಾವಿಗಳ ಸಾಲ ಮತ್ತು ಬಡ್ಡಿಯ ಮನ್ನಾ ಸುಮಾರು 15 ಕೋಟಿ ರೂ. ಹೊಸದಾಗಿ ನೀರಾವರಿಯಾದ ಭೂಮಿಗೆ ಐದು ವರ್ಷಗಳ ಕಾಲ ನೀರು ತೆರಿಗೆಯಿಂದ ವಿನಾಯಿತಿ, ಸಾಲದ ಅರ್ಜಿಗಳಿಗೆ ಸ್ಟಾಂಪ್ ಶುಲ್ಕ ವಿನಾಯಿತಿ, ಡಿಫಾಲ್ಟರ್ ಅಲ್ಲದ ರೈತರಿಗೆ ಸಾಬಾರ್ಡ್‌ನ ಶೇ. ಏಳೂವರೆ ಬಡ್ಡಿಯಲ್ಲೇ ಸಾಲ, ಜತೆಗೇ ಶೇ. ಐದರಷ್ಟು ಸಹಾಯಧನ-ಇವು ರೈತರಿಗೆ ನೀಡಲಾಗಿರುವ ಇನ್ನಿತರ ಸೌಲಭ್ಯಗಳು.

**ಕುಡಿಯುವ ನೀರು:** ಕೇವಲ ಆರು ತಿಂಗಳಲ್ಲಿ 13,350 ಕೊಳವೆ ಬಾವಿಗಳ ನಿರ್ಮಾಣದ ಅಪೂರ್ವ ದಾಖಲೆ. ಈ ಕಾರ್ಯಕ್ಕಾಗಿ 25 ಕೋಟಿ ರೂ. ವೆಚ್ಚ. ಎಲ್ಲ ಹಳ್ಳಿಗಳಿಗೂ ನೀರು ಪೂರೈಕೆಗಾಗಿ 100 ಕೋಟಿ ರೂ. ಯೋಜನೆ.

**ನೀರಾವರಿ:** ಹಳೇ ನೀರಾವರಿ ಯೋಜನೆಗಳಿಗೆ ವಿಶೇಷ ಗಮನ. ದೊಡ್ಡ ಮತ್ತು ಮಧ್ಯಮ ನೀರಾವರಿಗೆ 89 ಕೋಟಿ ರೂ. ಕಾವೇರಿ ನದಿ ಕಣಿವೆ



ಯೋಜನೆಗೆ 84 ಕೋಟಿ ರೂ. 80,000 ಎಕರೆಗೆ ಅಧಿಕ ನೀರಾವರಿ. 15 ಕೋಟಿ ರೂ. ವೆಚ್ಚದಲ್ಲಿ 400 ಕೆರೆಗಳ ನಿರ್ಮಾಣ.

**ಅಂತ್ಯೋದಯ:** ಬಡವರಲ್ಲಿ ಬಡವರಾದವರ ಸರ್ವಾಂಗೀಣ ಅಭಿವೃದ್ಧಿಗಾಗಿ ಅಂತ್ಯೋದಯ ಯೋಜನೆ. ಈ ಯೋಜನೆಯಿಂದ ಪ್ರತಿ ವರ್ಷ ಒಂದ ಲಕ್ಷಕ್ಕೂ ಹೆಚ್ಚು ಬಡ ಕುಟುಂಬಗಳ ಕಲ್ಯಾಣ. ಕಡು ಬಡ ಕುಟುಂಬಗಳನ್ನು ಗುರುತಿಸುವ ಕಾರ್ಯ ಈಗಾಗಲೇ ತ್ವರಿತಗತಿಯಲ್ಲಿ ಸಾಗಿದೆ.

**ಕೈಗಾರಿಕೆ:** ಹೊಸ ಕೈಗಾರಿಕೆ ನೀತಿ ಪ್ರಕಟಣೆ. ಗ್ರಾಮೀಣ ಕೈಗಾರಿಕೆಗಳಿಗೆ ಆದ್ಯತೆ. ತಿಂಗಳಿಗೆ ಒಂದು ಸಾವಿರದಂತೆ ಸಣ್ಣ ಕೈಗಾರಿಕಾ ಘಟಕಗಳ ಸ್ಥಾಪನೆಯ ಗುರಿ.

**ಹಿಂದುಳಿದ ವರ್ಗದವರ ಕಲ್ಯಾಣ:** ಹಿಂದುಳಿದ ವರ್ಗದ ಜನತೆಯ ಕಲ್ಯಾಣಕ್ಕಾಗಿ ದ್ವಿತೀಯ ಹಿಂದುಳಿದ ವರ್ಗಗಳ ಆಯೋಗ ನೆಮಕ. ಅಲ್ಪಸಂಖ್ಯಾತರ ಹಿತರಕ್ಷಣೆಗಾಗಿ ಮೊಟ್ಟ ಮೊದಲ ಬಾರಿಗೆ ಆಯೋಗವೊಂದರ ನೇಮಕ ಹರಿಜನ–ಗಿರಿಜನ ಅಭಿವೃದ್ಧಿ ಮಂಡಳಿಗೆ 12 ಕೋಟಿ ರೂ. ನೀಡಿಕೆ.

**ಶಿಕ್ಷಣ:** ಶಿಕ್ಷಣ ಕ್ಷೇತ್ರದ ಸಮಗ್ರ ಸುಧಾರಣೆಗಾಗಿ ಶಿಕ್ಷಣ ವಿಧೇಯಕ–ರಾಜ್ಯದ ವಿದ್ಯಾರ್ಥಿಗಳಿಗೆ ಮೆಡಿಕಲ್ ಸೀಟುಗಳ ಶುಲ್ಕ ರದ್ದು. ಸ್ಥಳೀಯ ಅಭ್ಯರ್ಥಿಗಳು ಮತ್ತು ಸ್ಟೈಪೆಂಡರಿ ಪದವೀಧರರು ಸರ್ಕಾರಿ ಸೇವೆಗೆ ಸೇರಲು ಗರಿಷ್ಠ ವಯೋಮಿತಿ ಏರಿಕೆ. ಕೆಲವೊಂದು ಡಿಗ್ರಿ ಮತ್ತು ಸ್ನಾತಕೋತ್ತರ ಪದವಿ ಪರೀಕ್ಷೆಗಳಲ್ಲಿ ಅತ್ಯಂತ ಹೆಚ್ಚು ಅಂಕ ಪಡೆದ ಹರಿಜನ ವಿದ್ಯಾರ್ಥಿಗಳಿಗೆ ಸರ್ಕಾರಿ ಅಧಿಕಾರಿಗಳಾಗಿ ನೇರ ನೇಮಕದ ಅವಕಾಶ. ಹಿಂದುಳಿದ ವರ್ಗಗಳ ಅಂತಹ ವಿದ್ಯಾರ್ಥಿಗಳಿಗೆ 2500-00 ರೂ. ನಗದು ಬಹುಮಾನ.

ನೈಸರ್ಗಿಕ ಸಮತೋಲನ ಕಾಪಾಡಲು ಮರ ಗಿಡಗಳನ್ನು ಬೆಳೆಸುವ ಬೃಹತ್ ಕಾರ್ಯಕ್ರಮ, ಮನೆ ಇಲ್ಲದವರಿಗೆ ಮನೆ, ನಿವೇಶನ ಹಂಚಿಕೆ, ಕುಶಲ ಕರ್ಮಿಗಳಿಗೆ ವಿಶೇಷ ಪ್ರೋತ್ಸಾಹ–ಸವಲತ್ತುಗಳು ಹೀಗೆ ಜನ ಹಿತಕ್ಕಾಗಿ ಕೈಗೊಂಡಿರುವ ಕಾರ್ಯಕ್ರಮಗಳು ಹಲವಾರು. ಸಾಧನೆಗೆ ಕ್ರಮಬದ್ಧವಾಗಿ ಕಾರ್ಯನಿರತವಾಗಿದೆ ನಿಮ್ಮ ಸರ್ಕಾರ.

**ಮಹಾಜನತೆಗೆ ನೀಡಿರುವ ಆಶ್ವಾಸನೆಗಳನ್ನು**
**ಈಡೇರಿಸಲು ಪಣತೊಟ್ಟಿದೆ–ಕರ್ನಾಟಕ ಸರ್ಕಾರ.**

**ಪ್ರಕಟಣೆ: ವಾರ್ತಾ ಮತ್ತು ಪ್ರಚಾರ ಇಲಾಖೆ**
**ಬೆಂಗಳೂರು.**

(43 ನೇ ಪುಟದಿಂದ)

ಅಗ್ರಹಾರವಾಗಿತ್ತೆಂದು ಮೆಚ್ಚಿಕೊಂಡು ತಮ್ಮ ಬರಹದ ಮೂಲಕ ಸಾರುತ್ತ ಅಚ್ಚಳಿಯದೆ ನಿಂತಿವೆ.

ಸಂಕಮದೇವರ ಕಾಲದ ಶಾಸನವು "....... ಕುಕನೂರು ಬ್ರಹ್ಮಲೋಕಕ್ಕೆ ಸಮಾನವಾಯಿತು" ಎಂದು ವರ್ಣಿಸಿದರೆ ಭೂಲೋಕಮಲ್ಲನ ಕಾಲದ ಶಾಸನವು

"ಚತುರಾಂಬೋಧಿಪರೀತ ಧಾತ್ರಿಯೊಳಳುಂಬಂ ಬೆಳ್ವಲದ ನೋಡರ್ಪಡ
ಪ್ರತಿಮಂ ತಾನೆನೆ ಚೆಲ್ವನಾವಿಶಯದೊಳ್ಸಂವೇಷ್ಟಿತಾರಾವಪಾು
ಪಿತಟಾಕಂ ಬಹುದೇವತಾಭವನದಿಂ ವೇದಾಢ್ಯರಿಂ ಯಜ್ಞದೀ
ಕ್ಷಿತರಿಂ ಶಾಸ್ತ್ರ—ಪುರಾಣತರ್ಕವಿದರಿಂ ಶ್ರೀಕುಕ್ಕನೂರೊಪ್ಪುಗುಂ'

ಎಂದು ಪ್ರಸ್ತುತಪಡಿಸುತ್ತದೆ. ಬಿಜ್ಜಳನ ಕಾಲದ ಶಾಸನವು"......ಕುಕನೂರಿನಲ್ಲಿ ಶ್ರೇಷ್ಠ ಅಗ್ರಹಾರವಿದ್ದು ಸಚ್ಚರಿತೆಯಿಂದ ಕೃತಯುಗವನ್ನು ನೆಲೆಗೊಳಿಸಿದಂತಿದೆ." ಎಂದು ಮೆಚ್ಚಿಗೆಯನ್ನು ವ್ಯಕ್ತ ಮಾಡಿದರೆ ಜಗದೇಕಮಲ್ಲನ ಕಾಲದ ಶಾಸನವು, ಕುಕನೂರಿನ ಅಗ್ರಹಾರದಲ್ಲಿ,

...... ಉದಗ್ರಿಣಿಗಳು ಸಮವಾಪ್ತ ಶಾಸ್ತ್ರ ಸ
ಜ್ಜನರನವದ್ಯರರ್ಥಿಜನಕರ್ಪ್ಪಿ ಕುಜರ್ಕವಿತಾಮಹಾರ್ಣವ
ವರ್ಣನುಚರಿತರ್ಸಮಸ್ತ ಬುಧಸಂಸ್ತುತರೆಂದು ಮಹಾಜನಂಗಳಂ
ಜನವೆನಿತಂ ಸಕೌತುಕದೆ ಸಂಸ್ತುತಿಗೆಯ್ವುದದೇನ ಹರ್ಣಿಶಂ
ಗರ್ವೋಪೇತರ್ ವಿದಿತ ಚ
ತುರ್ವೇದರ್ಸಕಳ ಶಬ್ದ ವಿದ್ಯಾನಿಪುಣ
ರ್ನಿರ್ಬಾಧಿತ ತರ್ಕ್ಕಸಾ
ಸಿರ್ವರ್ಸಲೆ ಕುಕನೂರೊಳಸದಳದೆಸೆದರು
ಸಕಳಕಳಾಪಸ್ಮೃತಿವಿದ
ರಕಳಂಕೋದಾತ್ತ ಚಿತ್ತರಗ್ನಿನ್ನಿಷ್ಟೋಮಾ
ದಿಕನಿಖಿಳಯಾಗ ಸಂಪಾ
ದಕ ರೆನಿಪರು ಕುಕನೂರ ವಿಬುಧ ಜನಂಗಳು"

ಎಂದು ಇಷ್ಟೆಲ್ಲ ಜ್ಞಾನಸಂಪತ್ತಿನ ವೈಭವವು ಇದ್ದಿತ್ತೆಂದು ಮನತುಂಬಿ ಕಣ್ಣಿಗೆ ಕಟ್ಟುವಂತೆ ವಿವರಗಳನ್ನು ನೀಡುತ್ತದೆ. ಪ್ರಾಚೀನ ಕಾಲದಿಂದಲೇ ವೃದ್ಧಿಹೊಂದುತ್ತ ಬಂದಿದ್ದ ಕುಕನೂರು 12 ನೆಯ ಶತಮಾನದಲ್ಲಿ ವಿದ್ಯೆಗೆ ಆಗರವಾಗಿ ಬೆಳೆದು ಬಂದಿತ್ತೆಂಬುದನ್ನು ಕನ್ನಡಿಗರು ಮರೆಯುವಂತಿಲ್ಲ.

ಇದೇ ಸಂದರ್ಭದಲ್ಲಿ 'ಅಗ್ರಹಾರ' ಎಂಬ ಹಳ್ಳಿಯನ್ನು ಕುರಿತು ಒಂದೆರಡು ಮಾತುಗಳನ್ನು ಹೇಳಬೇಕು. ಇದು ಬೀದರ ನಗರಕ್ಕೆ ಅತೀ ಸಮೀಪದಲ್ಲಿರುವ ಹಳ್ಳಿ. ಇಲ್ಲಿ ಅನಂತಶಯನ ಮಂದಿರವಿದ್ದು ಅಗ್ರಹಾರಕ್ಕೆ ಅನುಕೂಲವಾದ ಸ್ಥಳವಾಗಿದೆ. ಅಲ್ಲಿ ರಾಷ್ಟ್ರಕೂಟರ ಮತ್ತು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಸುಂದರ



ವಾದ ಅಗ್ರಹಾರವು ರೂಪುಗೊಂಡಿತ್ತೆಂದು ಊಹಿಸಲು ಸಾಕಷ್ಟು ಆಧಾರಗಳಿವೆ. ಇದೂ ಅಲ್ಲದೆ ಕರ್ನಾಟಕದ ಅರಸೊತ್ತಿಗೆಗಳು ಎಲ್ಲೆಲ್ಲಿ ಪ್ರಭಾವಿತವಾಗಿ ರಾಜ್ಯಭಾರ ಮಾಡಿದವೋ ಆಯಾಕಾಲಗಳಲ್ಲಿ ಆಯಾಭಾಗಗಳಲ್ಲಿ ವಿದ್ಯಾ ವೈಭವವನ್ನು ಬೆಳೆಸುವಲ್ಲಿ ಅವು ಎಲ್ಲಿಯೂ ಹಿಂದೆ ಬೀಳಲಿಲ್ಲ. ಹಾಗೆ ವಿಚಾರ ಮಾಡಿದರೆ ಈ ಭಾಗದಲ್ಲಿ ಮಾನ್ಯಖೇಟ, ಕಲಬುರುಗಿ ಬಳಿಯಲ್ಲಿರುವ ರಾಮತೀರ್ಥ, ಕಲ್ಯಾಣ, ಕಾಳಗಿ, ಭಾಲ್ಕಿ, ಕುರಡಿ, ಆನೆಗುಂದಿ ಲಿಂಗಸುಗೂರಿನ ಬಳಿ ಕರಡಕಲ್ ಮೊದಲಾದ ಕಡೆಗಳಲ್ಲಿ ಯಶಸ್ವಿಯಾದ ಗುರುಕುಲಗಳು ಅಗ್ರಹಾರಗಳು ಬೆಳೆದು ಬಂದಿದ್ದವೆಂದು ಬಲವಾಗಿ ಊಹಿಸಬಹುದಾಗಿದೆ. ಹೀಗೆ ಹೈದರಾಬಾದ ಕರ್ನಾಟಕವು ವಿದ್ಯಾವೈಭವದ ಪರಂಪರೆಯನ್ನು ಪ್ರಾಚೀನ ಕಾಲದಿಂದಲೂ ಕಾಯ್ದುಕೊಂಡು ಬಂದಿದೆ.

ಇತ್ತೀಚೆಗೆ 10–9–1980 ರಂದು ಕರ್ನಾಟಕ ರಾಜ್ಯದ ಮುಖ್ಯಮಂತ್ರಿಗಳಾಗಿದ್ದ ಶ್ರೀ ಆರ್. ಗುಂಡೂರಾಯರ ಮುಂದಾಳುತನದಲ್ಲಿ, ಈ ವಿಭಾಗದ ಮಂತ್ರಿಗಳ ಬೆಂಬಲದೊಂದಿಗೆ, ಕರ್ನಾಟಕ ರಾಜ್ಯದ ವಿದ್ಯಾ ಮಂತ್ರಿಗಳಾದ ಶ್ರೀ ಜಿ. ಬಿ. ಶಂಕರರಾವ್ ಅವರು ನಡೆದುಬಂದ ಈ ಭಾಗದ ವಿದ್ಯಾವೈಭವಕ್ಕೆ ಕಲಬುರಗಿಯಲ್ಲಿ ವಿಶ್ವವಿದ್ಯಾಲಯವನ್ನು ಆರಂಭಿಸಿ ಶ್ರೀಗಂಧದ ಸುಗಂಧವನ್ನು ತುಂಬಿದ್ದಾರೆ. ಈ ವಿದ್ಯಾವೈಭವದ ಘಮ ಘಮವು ಕಾವೇರಿಯಿಂದಮಾಗೋದಾವರಿಗಷ್ಟೆ ಅಲ್ಲ. ಆಸೇತು ಹಿಮಾಚಲವಷ್ಟೇ ಅಲ್ಲ, ಇಡೀ ಪ್ರಪಂಚದ ತುಂಬೆಲ್ಲ ಘಮಘಮಿಸಲೆಂದು ವಿದ್ಯಾಪಕ್ಷಪಾತಿಗಳೆಲ್ಲ ತುಂಬು ಹೃದಯದಿಂದ ಹಾರೈಸಿದ್ದಾರೆ. ಈ ಹಾರೈಕೆ ಗುರುಕುಲ ಪದ್ಧತಿಯ ಹೊಸತಾನವಿತಾನಗಳನ್ನು ಹೊಂದಿ, ನವನಾಗರಿಕತೆಯನ್ನೂ, ಹೊಸ ಹೊಸ ಸಂಶೋಧನೆಗಳನ್ನು ವೈಗೂಡಿಸಿಕೊಂಡು ಚೇತೋಹಾರಿಯಾಗಿರುವುದರ ಸಂಕೇತ. ಸಂಸ್ಕೃತಿಯೂ ಶ್ರೀಮಂತವಾಗುತ್ತಿರುವುದರ ಪ್ರತೀಕ.

---

## ಬಾಲ್ಯ 'ಹಣ್ಣು ಹಣ್ಣು' ಎಂದಿತು.

—ಸಿದ್ಧಯ್ಯ ಪುರಾಣಿಕ

ಬಾಲ್ಯ:– 'ಹಣ್ಣು ಹಣ್ಣು' ಎಂದಿತು ;
ತಾರುಣ್ಯ: 'ಹೆಣ್ಣು ಹೆಣ್ಣು' ಎಂದಿತು ;
ವಾರ್ಧಕ್ಯ:– 'ಹೊನ್ನು, ಹೊನ್ನು' ಎಂದಿತು ;
ಮುಪ್ಪು:– 'ಮಣ್ಣು, ಮಣ್ಣು' ಎಂದಿತು !

ಇದುವರೆಗೆ ನೀನು ತುಳಿದೆ ಮಣ್ಣನ್ನು
ಇನ್ನೇನು, ಮಣ್ಣು ತುಳಿಯಲಿದೆ ನಿನ್ನನ್ನು !

—ಆಯ್ದ ಕವನಗಳು

# ನನಗೆ ಅಮೃತ ಬೇಕಿಲ್ಲ

—ಸಿದ್ಧಯ್ಯ ಪುರಾಣಿಕ

ನನಗೆ ಅಮೃತ ಬೇಕಿಲ್ಲ
ಮಡದಿ ಕಡೆದೀವ ಮಜ್ಜಿಗೆಯೇ ಸಾಕು !
ಕಲ್ಪವೃಕ್ಷದ ಹಣ್ಣು ಬೇಕಿಲ್ಲ–
ಸಾನೆ ದುಡಿದುಣುವ ಕಜ್ಜಾಯ ಸಾಕು !
ಸ್ವರ್ಗ, ನಂದನ, ಅಲಕ ಬೇಕಿಲ್ಲ–
ಒಮ್ಮೆಯುಕ್ಕುವ ಮುರುಕು ಮನೆಯೆ ಸಾಕು !
ಸುಧೆಯು ಬೇಕೆನುವ ಸುರಸುಂದರಿಯು ಬೇಕಿಲ್ಲ–
ರೊಟ್ಟಿ–ತಟ್ಟುಪ ಸರಳ ಸತಿಯೆ ಸಾಕು !

ಆಯ್ದ ಕವನಗಳು





ಶ್ರಾವಣ ಬಂತು ನಾಡಿಗೆ 9ನೇ ಪುಟದಿಂದ

ಇದು ಸಮಷ್ಟಿ ಚೇತನವನ್ನು ಜಾಗೃತಗೊಳಿಸುವ ಸಂಧಿಕಾಲ. ವೀರಶೈವ ಧರ್ಮವು ವಿಶ್ವಧರ್ಮ; ಮಾನವಧರ್ಮ; ಹೃದಯಪ್ರಧಾನ ಧರ್ಮ, ಆಚಾರ ಪ್ರಧಾನವಾದ ಧರ್ಮ. ಅಂತೆಯೇ 'ನ ವಿರಶೈವ ಸದೃಶಂ ಮತ ಮಸ್ತಿ ಜಗತ್ರಯೆ' ಎಂಬ ಪಾರಮೇಶ್ವರಾಗಮದ ಉಕ್ತಿಯೇ ಸಾಕ್ಷಿ. ಶರಣ-ಶರಣೆಯರ ಸತ್ಯ ಶೋಧನೆ ಸತ್ಯ ಸಾಧನೆಯ ಫಲವಾಗಿ ಈ ಧರ್ಮವು ಪರಿಪೂರ್ಣಗೊಂಡಿದೆ; ಪರಿಪಕ್ವವಾಗಿದೆ. ಸಮಾನತೆ ಸಹೋದರತೆ, ಸ್ವಾತಂತ್ರತೆಯ ಉದಾರ ಉದಾತ್ತ ತತ್ವಗಳನ್ನು ಎತ್ತಿ ಹಿಡಿದಿದೆ. ಪಟ್‌ಸ್ಥಳ ಧ್ವಜವಿದೆ. ಈ ಮಾನವ ಧರ್ಮದ ಸರಿಯಾದ ಸಮರ್ಪಕವಾದ ತಿಳುವಳಿಕೆಯನ್ನು ಮಾಡಿಕೊಡಬೇಕಾಗಿದೆ. ಏಕದೇವೋಪಾಸನೆ ಶಿವಯೋಗ, ಇಷ್ಟಲಿಂಗ, ಸ್ತ್ರೀಸಮಾನತೆ, ದೀನದಲಿತರ ಉದ್ಧಾರ ಹಾಗೂ ಕನ್ನಡ ಭಾಷೆಯ ಬೆಳವಣಿಗೆ ಮೊದಲಾದ ಅತ್ಯಂತ ಮಹತ್ವದ ವಿಚಾಗಳಿಂದ ವೀರಶೈವ ಧರ್ಮ ಪ್ರಗತಿಶೀಲವಾಗಿದೆ. ಕನ್ನಡ ಭಾಷೆಯನ್ನು ರಾಷ್ಟ್ರೀಯ ಭಾಷೆಯನ್ನಾಗಿ ಪರಿವರ್ತಿಸಿದ ಕೀರ್ತಿ ನಮ್ಮವರಿಗೆ ಸಂಪೂರ್ಣವಾಗಿ ಸಲ್ಲುತ್ತದೆ. ವಚನಗಳೆಂದರೆ ನಡುಗನ್ನಡಶೈಲಿಯ ಅನುಭಾವಗದ್ಯದಲ್ಲಿ ಉಸುರಿದ ಆಧ್ಯಾತ್ಮಿಕ ಭಾವಗೀತೆಗಳು. ಜಗತ್ತಿನ ಸಾಹಿತ್ಯದಲ್ಲಿ ಇವುಗಳನ್ನು ಹೋಲುವ ರೂಪ ಕಡಿಮೆ, ಕನ್ನಡದಲ್ಲಿಯಂತೂ ಅಪೂರ್ವ. ವಚನಗಳ ಕನ್ನಡಸಾಹಿತ್ಯದ ಉಪನಿಷತ್ತುಗಳು. ಭಾವಗೀತೆಗಳ ಸ್ವಯಂಪೂರ್ಣತೆ ಪಡೆದಿವೆ ಎಂದು ವಿಮರ್ಶಕ ವಿಚಕ್ಷಕರು ಹೃದಯ ತುಂಬಿ ಬಣ್ಣಿಸಿದ್ದಾರೆ. ಕಾಶ್ಮೀರ, ಮಾಳವ, ಗುಜರಾಥ, ಅಪಘಾನಿಸ್ಥಾನ, ಮಹಾರಾಷ್ಟ್ರ, ಆಂಧ್ರ, ತಮಿಳು, —ಹೀಗೆ ಅನೇಕ ಪ್ರಾಂತಗಳಿಂದ ಓಡೋಡಿ ಬಂದ ಶರಣ- ಶರಣೆಯರು ಅನುಭವ ಮಂಟಪದ ಮುಖಾಂತರ ಕನ್ನಡ ಭಾಷೆಯನ್ನು ಕಲಿತು ಕನ್ನಡದಲ್ಲಿಯೇ ವಚನ ರಚಿಸಿದ ಮೋಳಿಗೆಯ ಮಹಾದೇವ, ಸೌರಾಷ್ಟ್ರದ ಆದಯ್ಯ , ಆಪಘಾನಿಸ್ತಾನದ ಮರುಳ ಶಂಕರದೇವ, ಡೋಹರ ಕಕ್ಕಯ್ಯ ಮಹಾರಾಷ್ಟ್ರದ ಉರಿಲಿಂಗದೇವ; ಉರಿಲಿಂಗಪೆದ್ದಿ ಮೊದಲಾದವರು ಉತ್ಕೃಷ್ಟ ಕನ್ನಡದಲ್ಲಿ ಉದಾತ್ತ ವಿಚಾರಗಳನ್ನು ಅತ್ಯಂತ ಸಮರ್ಥ ರೀತಿಯಿಂದ ಅಭಿವ್ಯಕ್ತಗೊಳಿಸಿರುವುದು ಐತಿಹಾಸಿಕ ಸತ್ಯ. ಇಂದು ಕರ್ನಾಟಕದಲ್ಲಿಯೇ ಕನ್ನಡವು ಪರದೇಶಿಯಾಗಿದೆ. ಕನ್ನಡ ಸಾಹಿತ್ಯ, ವೀರಶೈವ ಸಾಹಿತ್ಯವೆಂದರೆ ವೀರಶೈವ ಸಾಹಿತ್ಯ, ವೀರಶೃವ ಸಾಹಿತ್ಯವೆಂದರೆ ಕನ್ನಡ ಭಾಷೆ ಎಂದು ಅನಕೃ ಸ್ಪಷ್ಟವಾಗಿ ಸಾರಿರುವುದನ್ನು ಈ ಸಂದರ್ಭದಲ್ಲಿ ಸ್ಮರಿಸಿಕೊಳ್ಳಬೇಕಾಗಿದೆ. ಹಾಗೆ ನೋಡಿದರೆ ಕನ್ನಡ ಭಾಷೆಯ ಬೆಳವಣಿಗೆಗೆ ಯಾವ ತೊಡಕುಬರಬಾರದಿತ್ತು. ಮಹಾರಾಷ್ಟ್ರ ತಮಿಳು, ತೆಲುಗು ಪ್ರಾಂತಗಳಲ್ಲಿ ಕನ್ನಡಕ್ಕೆ ತಕ್ಕ ಸ್ಥಾನವನ್ನೇ ಕೊಟ್ಟಿರುವುದಿಲ್ಲ.

ಅಲ್ಲಿಯ ಕನ್ನಡಿಗರ ವ್ಯಥೆಯ ಕಥೆ-ಕಣ್ಣೀರು ತರಿಸುವಂತಿದೆ. ಈ ಬಗೆಯ ಜ್ವಲಂತ ಸಮಸ್ಯೆಗಳತ್ತ ನಮ್ಮವರ ವಿಶೇಷ ಗಮನಕೊಡುವ ಕಾಲಪ್ರಾಪ್ತವಾಗಿದೆ. ಈ ಶ್ರಾವಣಮಾಸದ ಕಾರ್ಯಕ್ರಮಗಳು ಅತ್ಯಂತ ಯಶಸ್ವಿಯಾಗಿ ಜರುಗಲೆಂದು ಹಾರೈಸುತ್ತೇನೆ.

---

**ಸಂಪಾಕೀಯ** (7 ನೇ ಪುಟದಿಂದ)

ಕಿರಿಕಿರಿ–ಇರಿಸುಮುರುಸು. ಪ್ರಜಾಪ್ರಭುತ್ವ ಪದ್ಧತಿಯಲ್ಲಿ ಇಂಥ ಪ್ರವೃತ್ತಿಯೇ ಮುಂದುವರಿದರೆ ಜನಕ್ಕೆ ಆ ಪದ್ಧತಿಯಲ್ಲಿ ನಂಬಿಕೆಯೇ ಹೋಗಿಬಿಡಬಹುದು, ಇನ್ನೊಂದು ಜನಕ್ಕೆ ಬೇಡವಾದ ಪ್ರಭುತ್ವ ಬರಬಹುದು.

ಯಾವ ಸರಕಾರವೇ ಆಗಲಿ ಅದು ತನ್ನ ಆರ್ಥಿಕ ಇತಿ-ಮಿತಿಯಲ್ಲಿ ಕೆಲಸ ಮಾಡಬೇಕಾಗುತ್ತದೆ. ತನ್ನ ಆದಾಯ-ಖರ್ಚುಗಳ ಲೆಕ್ಕಾಚಾರಗಳನ್ನು ನೋಡಿಕೊಂಡು ಸಾಧ್ಯವಾದಷ್ಟು ಮಟ್ಟಿಗೆ ಜನಹಿತದ ಲೆಕ್ಕಾಚಾರದಲ್ಲಿಯೂ ಇರುತ್ತದೆ. ಆದರೆ ಆದಾಯಕ್ಕಿಂತ ಖರ್ಚಿನ ಬಾಬುಗಳು ಹೆಚ್ಚಾದಾಗ ಅದು ನಿಸ್ಸಹಾಯಕವಾಗುತ್ತದೆ. ಇತ್ತೀಚೆಯ ದಿನಗಳಲ್ಲಿ ಜನತೆ ತನ್ನ ಸೌಲಭ್ಯಕ್ಕಾಗಿ ತನಗೆಂದು ಬೇಕು. ಇದು ಬೇಕು ಎಂದು ಸರ್ಕಾರದ ಮೇಲೆ ಪದೇ ಪದೇ ಒತ್ತಡ ತರುತ್ತದೆ. ಇದೆನೋ ಸರಿಯೆ, ಇದು ಜನತೆಯ ಹಕ್ಕಾಗಿರಬಹುದು, ಆದರೆ ಜನತೆ ಸರಕಾರಕ್ಕೆ ತನ್ನ ಪ್ರಜಾಪ್ರಭುತ್ವ ನೀತಿಗನುಗುಣವಾಗಿ ಸಲ್ಲಿಸುವ ಕಾಣಿಕೆಯೇನು ? ತಮ್ಮ ಪ್ರತಿನಿಧಿಗಳಿಂದಲೇ ಮಾಡಲ್ಪಟ್ಟ ಶಾಸನಗಳನ್ನು ನಾನು ಎಷ್ಟು ಗೌರವಿಸಿದ್ದೇನೆ ? ಎಷ್ಟರ ಮಟ್ಟಿಗೆ ನಾನು ಕಳ್ಳ-ಸತ್ಯವಂತ ಎಂಬುದನ್ನು ಎದೆಮುಟ್ಟಿ ನೋಡಿಕೊಳ್ಳಬೇಕಾಗುತ್ತದಲ್ಲವೇ ? 'ತಾನು ಕಳ್ಳ-ಪರರನ್ನು ನಂಬ' ಎಂಬ ಗಾದೆಯಂತಾದರೆ ಹೇಗೆ ? ಸರಕಾರ ಎಲ್ಲಿಂದ ತರಬೇಕು ? ಜನರ ಒತ್ತಾಯಕ್ಕೆ ಮಣಿದು ಸಾಲಸೋಲ ಮಾಡಿ ದೇಶದ ಮೇಲೆ ಸರಕಾರ ಸಾಲ ಹೊರಿಸಿ ಹೋದರೆ ಬಂದದ್ದೇನು, 'ಸಾಲಿಗನು ಬಂದು ಒದೆವಾಗ' ? ಈ ನೀತಿಯನ್ನು ಪ್ರಜಾಪ್ರಭುತ್ವದಲ್ಲಿ ಎಲ್ಲರೂ ಅರಿತು ಸಾಗದಿದ್ದರೆ, ಮುಂದೆ ಒದಗುವ ಭಯಾನಕ ವಿಪತ್ತುಗಳಿಗೆ ನಾವೇ ಆಹ್ವಾನ ಕೊಟ್ಟಂತಾಗುತ್ತದೆ. ಸಾವಿರ ವರ್ಷಗಳ ಭಾರತದ ಹೊಣೆಗೆಟ್ಟ ನೀತಿಯಿಂದ ಅನುಭವಿಸಿದ ಭವಣೆಗಳನ್ನು ನೆನೆದು ಪೌರುಷಪ್ರಧಾನರಾಗಿ ನ್ಯಾಯ ಮತ್ತು ವೈಯಕ್ತಿಕ ಸತ್ಯವನ್ನು ಎತ್ತಿ ಹಿಡಿಯುವವರಾಗದಿದ್ದರೆ ಎಲ್ಲವೂ ಹೊಳೆಯಲ್ಲಿ ಹುಣಿಸೆ ತೊಳೆದಂತೆ, ಎಂಬುದನ್ನು ಜನತೆಯೂ ಸರಕಾರವೂ ಬೇಗ ಅರಿತಷ್ಟೂ ಒಳ್ಳೆಯದು.

LICENCED TO POSTWITHOUT PRE PAYMENT LICENCE NO. 3
SIDDAGANGA MONTHLY Reg. No. KRN Q-9

## ಕಡಿಮೆ ಹಣ ಖರ್ಚು ಮಾಡಿ
## ಹೆಚ್ಚು ಬಟ್ಟೆಗಳನ್ನು ಒಗೆಯಿರಿ

- ಇದೀಗ ನೀವು ಸಾಬೂನಿಗೆ ಕಡಿಮೆ ಹಣ ಖರ್ಚು ಮಾಡಿ ಹೆಚ್ಚು ಬಟ್ಟೆಗಳನ್ನು ಒಗೆಯಬಹುದು.
- ಕಸ್ತೂರಿ ನೀಲಂ ಹಾಗೂ ಕಸ್ತೂರಿ ಬಾರ್ ಸೋಪ್ ಉಪಯೋಗಿಸುವುದರಿಂದ ಇದು ಸಾಧ್ಯ.
- ಕಸ್ತೂರಿ ಸಾಬೂನುಗಳು ಬಹು ಉಳಿತಾಯಕರವಾದುದು ಅಲ್ಲದೆ, ಪ್ರತಿ ಬಾರ್ ಸೋಪಿನಿಂದಲೂ ಹೆಚ್ಚು ಬಾರಿ ಒಗೆಯಲು ಸಾಧ್ಯವಾಗುತ್ತದೆ.
- ಇದರಲ್ಲಿ ವಿಶೇಷ ಡಿಟರ್ಜೆಂಟುಗಳು ಮಿಶ್ರಿತವಾಗಿರುವುದರಿಂದ ನಿಮ್ಮ ಉಡುಪುಗಳು ಬಿಳುಪಿಗಿಂತಲೂ ಅತ್ಯಧಿಕ ಉಜ್ವಲವಾಗಿರುತ್ತವೆ.

ಕಸ್ತೂರಿ ಸಾಬೂನುಗಳನ್ನು ಇಂದೇ ಉಪಯೋಗಿಸಿರಿ

'ಕಸ್ತೂರಿ'
ಬಾರ್ ಸೋಪ್

'ಕಸ್ತೂರಿ'
ನೀಲಂ ಬಾರ್ ಸೋಪ್

ತಯಾರಕರು :

**ರಾಮಕೃಷ್ಣ ಆಯಿಲ್ ಮಿಲ್, ತುಮಕೂರು.**

ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಕ್ಷೇತ್ರ.